
ಚಂದಮಾಮ ರಾಮಾಯಣ
ಚಿತ್ರಗಳು-ಚಂದಮಾಮ ಕಲಾವಿದರು;
ಬಳಸಿದ ಕಾವ್ಯಗಳು-ತೊರವೆ,ಪಂಪರಾಮಾಯಣ.
ಸಂಕಲನ-ವಾಟೆ ಗಣೇಶ



ಶ್ರೀಜನಕಜಾರಮಣ ವಿಮಲ ಸ|
ರೋಜಸಂಭವಜನಕನನುಪಮ|
ರಾಜಶೇಖರವಿನುತ ನಿಖಿಳಾಮರಕಿರೀಟಚಯ||
ರಾಜಿತಾಮಲ ಲಲಿತಪದಪಂ|
ಕೇಜನಾನತಜನ ದಯಾ ಸುರ|
ಭೂಜ ತೊರವೆಯರಾಯ ನರಹರಿ ಪಾಲಿಸುಗೆ
ಜಗವ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಮಾಲುಬ್ಧಕನೆ ನೀನಾಕಲ್ಪಂಬರಂ
ಬರ್ದುಕಿರ್ಪುದೇಂ|
ವೇಳೆಗೈತಂದು ನೀಂ ಕ್ರೌಂಚಯುಗ್ಮದಿಂ
ಕೊಂದೆಕಾಮಿಯಂ||



ಅಹುದಲೇ ವಾಲ್ಮೀಕಿ ಕವಿತೆಯ|
ವಹಣಿ ಲೇಸ್ಸೈ ಶೋಕಮುಖ ಸ|
ನ್ನಿಹಿತ ತಚ್ಛ್ಲೋಕ ಪ್ರಬಂಧ
ಸುಕಾವ್ಯರಚನೆಯಲಿ||
ವಹಿಸಲೀ ಪದ್ಧತಿ ಪರಿಶ್ರುತ|
ವಹುದು ಬಳಿಕೀ ಲೋಕದಲಿ ನಿನ|
ಗಹುದು ಕೀರ್ತಿ ಪ್ರಥಮಕವಿಯೆಂದಜನ
ಸಭೆಯೊಳಗೆ||
ಚಿತ್ರ ಶಂಕರ್ ಚಂದಮಾಮ


ಆದಿಕವಿ ಕವಿರಾಜಹಂಸನ|
ನಾದಿಕವಿಕುಲಕಮಲಮಿತ್ರ ಮ|
ಹಾದಿವೌಕಸಪ್ರಚುರಭಾಷಾಕವಿಜನೋತ್ತಂಸ||
ವೇದಗರ್ಭವರಪ್ರಸಾದಾ|
ಹ್ಲಾದಕವಿ ರಘುವರಕಥಾವಿಮ|
ಲೋದದಿಂದು ಮಹಾಮುನಿ ಪ್ರಾಚೇತಸಂ
ವಂದೇ||

ಚಿತ್ರ ಶಂಕರ್ ಚಂದಮಾಮ



ಸುರನರೋರಗ ಭುವನಲಕ್ಷ್ಮಿಯ|
ಸುರುಚಿರದ ಮುಕ್ತಾಫಲದ ಬಂ|
ಧುರದ ಕಾಂಚೀದಾಮದಂತಿರೆ
ಸಕಲವಿಭವದಲಿ||
ಅರಸ ದಶರಥ ಚಕ್ರವರ್ತಿಯ|
ಧರೆಯ ಪರಿವೃತ ಕೀರ್ತಿಲತೆ ವಿ|
ಸ್ಫುರಿಸುತಿರ್ದುದು ಸಕಲ ಜನಪದ ಜನದ
ಕಣ್ಮನಕೆ||
ಚಿತ್ರ ಶಂಕರ್ ಚಂದಮಾಮ



ಧರಣಿಜಾಸುತ ಕೇಳು ದಶರಥ|
ಧರಣಿಪತಿ ರವಿಕುಲದ ಪಾರಂ|
ಪರೆಯ ಪರಮಾಪ್ತಪ್ರಧಾನರ ಕರೆಸಿ
ಮುನಿವರರ||
ವರವಚೋಃಭಿಪ್ರಾಯ ಮತ ವಿ|
ಸ್ತರಣವನು ಸಿದ್ಧಾರ್ಥ ಮುಖ್ಯರಿ|
ಗೊರೆದು ನಿಮ್ಮಭಿಮತವದೇನೆಂದರಸ
ಬೆಸಗೊಂಡ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ, ಚಂದಮಾಮ



ಸಂತವಿಸು ರಾಜೇಂದ್ರ ಚಿತ್ತದ|
ಚಿಂತೆಯಿದು ತಾನೈಸಲೇ ನಿನ|
ಗಂತಕನ ಭಯವಿಲ್ಲ ಸಾಕಾಮಾತದಂತಿರಲಿ||
ಸಂತತಿಯ ಸೌಭಾಗ್ಯಸಿರಿಯ ನಿ|
ತಾಂತಕಿದೆಲಾ ನಿನಗೆ ಸಪ್ತಸು|
ತಂತು ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕದ||
ಚಿತ್ರ ಶಂಕರ್ ಚಂದಮಾಮ



ಹರನು ಪೂರ್ವದಲಾ ಮಹಾಮುನಿ|
ವರನ ಜನನದೊಳಿತ್ತ ವರವುಂ|
ಟರಸ ಕೇಳ್ ದುರ್ಭಿಕ್ಷ ಡಾಮರ ಬಾಧೆ
ಖೇದಗಳು||
ಇರದವೊಲು ತನ್ಮುನಿಪನಿರ್ದೂ|
ರ್ವರೆಯೊಳಂತದರಿಂದ ನೀನಾ|
ವರ ವಿಭಾಂಡಕಸುತನ ನಗರಿಗೆ
ಕರೆಸಿಕೋಯೆಂದ||

ಚಿತ್ರ ಶಂಕರ್ ಚಂದಮಾಮ



ಮುನಿಪನಿದ್ದನು ಮುಗ್ಧತಾಪಸ|
ಮುನಿಗಣದ ಮಧ್ಯದಲಿ ಸಮ್ಮೇ|
ಳನದ ಪುಣ್ಯಮೃಗಾವಳಿಯ
ಸೋಂಕಿನಲುಪಾಸನೆಯ||
ವನರುಹಾಕ್ಷಧ್ಯಾನದಲಿ ಕೇ|
ಳಿನಕುಲೇಶ್ವರ ತನ್ಮುನೀಶ್ವರ|
ನನುವರಿದು ಹೊದ್ದಿದರು ಹರಿಮೇಖಲೆಯ
ಧಾಳಿಯಲಿ||

ಚಿತ್ರ ಶಂಕರ್ ಚಂದಮಾಮ


ಮೆಚ್ಚಿ ಮರುಳಾದಾ ಮುನೀಂದ್ರನ|
ನುಚ್ಚಿ ತಂದರು ತರುಣಿಯರು ಬಳಿ|
ಕಚ್ಚರಿಯ ಕೇಳರಸ ಬೆರಸಿದವಭ್ರವಂಬರವ||
ಮುಚ್ಚಿಕೊಂಡವು ಮುರಿದು ನೇಸರು|
ಗಿಚ್ಚಿನಖಿಳಾಂಬುಧಿಯ ಜಲವನು|
ಕಚ್ಚಿತಂದುಗುಳಿದುವು ರೋಮಾಂಘ್ರಿಪನ
ಭೂಮಿಯಲಿ||

ಚಿತ್ರ ಶಂಕರ್ ಚಂದಮಾಮ

ಮುನಿಪತಿಯನವನೀತ ಗುರುಭಾ|
ವನೆಯಲೇ ಪೂಜಿಸಿದ ಬಳಿಕರ|
ಮನೆಯ ನಿಕಟಪ್ರಾಂತ್ಯದಲಿ ಬೀಡಾರವನು
ರಚಿಸಿ||
ಮುನಿಯ ಕಳುಹಿದು ಕರೆಸಿದನು ವರ|
ಮುನಿವಸಿಷ್ಠನ ತನ್ಮುನೀಂದ್ರನ|
ವಿನುತ ವಚನಾನುಜ್ಞೆಯಲಿ
ಕೈಕೊಂಡನಧ್ವರವ||.ಚಿತ್ರ ಶಂಕರ್,
ಚಂದಮಾಮ



ಮಿಸುಪ ಕಾಂಚನಪಾತ್ರೆಯಲಿ ಪೂ|
ರಿಸಿದ ಪರಮಾನ್ನವನು ಬೊಮ್ಮದ|
ರಸದ ಪರಿಪೂರ್ಣವನು
ಸತ್ವರಜಸ್ತಮೋಗುಣದ||
ಎಸಕದಭಿಗತಪೂರ್ಣವನು ಸುಮ|
ನಸರು ಜಯಜಯವೆನಲು ಕರಯುಗ|
ಬಿಸರಹದಿನೊಲಿದಿತ್ತುದಾ ನಿಜಮೂರ್ತಿ
ದಶರಥಗೆ||
ಚಿತ್ರ ಶಂಕರ್ ಚಂದಮಾಮ



ಭೋರನಬ್ಬರಿಸಿದವು ದಿವಿಜರ|
ಭೇರಿಗಳು ದಿವದವನಿಯರಸುಗ|
ಳೂರೊಳಗೆ ಗುಡಿಗಟ್ಟಿದರು ಕುಡಿಯಿಟ್ಟ
ಹರುಷದಲಿ||
ವೀರದಶರಥಸಾರ್ವಭೌಮನ|
ಪಾರ ಸಂತೋಷಾಂಬುನಿಧಿ ಮಿಗೆ|
ಮೇರೆದಪ್ಪಿದುದಾದಿನಾರಾಯಣನ ಜನನದಲಿ||
ಚಿತ್ರ, ಶಂಕರ್ ಚಂದಮಾಮ




ಪಂಪ ರಾಮಾಯಣ

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಮೇಲೆ ನಿರುಪಮ ವೇದಶಾಸ್ತ್ರ ವಿ|
ಶಾಲವಕ್ತ್ರಗಳಾದರಲ್ಲಿಂ|
ಮೇಲನುಗ್ರಹವಾಯ್ತು ಮುನಿಪ ವಸಿಷ್ಠನಿಂ
ಬಳಿಕ||
ನಾಲುವರು ನಂದನರಿಗವನೀ|
ಪಾಲ ತೇಜೋರಾಜಿ ಮಿಗೆ ಸ|
ಮ್ಮೇಳವಿಸಿದುದು ಮೆರೆದುದವರಭ್ಯುದಯ
ದಿನದಿನಕೆ||
ಚಿತ್ರ ಶಂಕರ್ ಚಂದಮಾಮ



ಧರಣಿಪತಿ ಮುನಿಸಾರ್ವಭೌಮನ|
ಬರವ ಕಾಣುತ ದಿಮ್ಮನುರುವಿ|
ಷ್ಟರವನಿಳಿದಿದಿರ್ವಂದು ವಿನಮಿತನಾಗಿ
ಕೈಗೊಟ್ಟು||
ಅರಮನೆಗೆ ತಂದರ್ಘ್ಯಪಾದ್ಯೋ|
ತ್ಕರವಿಧಾನದಿನಾ ಮುನಿಯನುಪ|
ಚರಿಸಿ ಬಿಜಯಂಗೈದ ಹದನೇನೆಂದು
ಬೆಸಗೊಂಡ||
ಚಿತ್ರ ಶಂಕರ್ ಚಂದಮಾಮ



ವಿಮಲಮತಿ ಕುಶ ಕೇಳು ಸಿದ್ಧಾ|
ಶ್ರಮದೊಳಿದ್ದನು ಸಕಲಮುನಿಕುಲ|
ಕಮಲಮಿತ್ರನು ವಿಮಲ
ವಿಶ್ವಾಮಿತ್ರನೀಚೆಯಲಿ||
ಅಮರರಿಪು ಮಾರೀಚ ಘನ ವಿ|
ಕ್ರಮ ಸುಬಾಹುಗಳೆಂಬ ರಾಕ್ಷಸ|
ರಮಣರಾ ಮುನಿಮುಖಕೆ
ಕಂಟಕರಾದರಡಿಗಡಿಗೆ||
ಚಿತ್ರ ಶಂಕರ್ ಚಂದಮಾಮ



ನಮಿಸಿ ತಂದೆಗೆ ಗುರುವಸಿಷ್ಠನ|
ಸುಮುಖತೆಯ ಹರಕೆಯನು ಕೈಕೊಂ|
ಡಮಿತವಿಕ್ರಮನಿಷುಧಿಚಾಪಕೃಪಾಣವನು
ಧರಿಸಿ||
ಗಮಿಸಿದನು ಮುನಿಯೊಡನೆ ಹರುಷೋ|
ದ್ಗಮದಲಾತನ ಬೆಂಬಳಿಯಲಾ|
ಕ್ರಮದಿನಾ ಸೌಮಿತ್ರಿ ಕಳುಹಿಸಿಕೊಂಡನಾ
ನೃಪನ||
ಚಿತ್ರ ಶಂಕರ್ ಚಂದಮಾಮ



ಪುರವ ಹೊರವಂಟಾ ಮುನಿಪನಾ|
ತರಣಿಕುಲಜರು ಸಹಿತ ಬಂದನು|
ಸರಯುವೆಂಬ ತರಂಗಿಣಿಗೆ
ನಿಜಭಾವಶುದ್ಧಿಯಲಿ||
ಪರಮನಿಷ್ಠೆಯಲಾ ಮುನಿಪನಘ|
ಮರುಷಣಾದಿ ಸಮಸ್ತ ಕರ್ಮಾಂ|
ತರವ ವಿರಚಿಸಿಕೊಟ್ಟನವರಿಬ್ಬರಿಗನುಗ್ರಹವ||

ಚಿತ್ರ ಶಂಕರ್ ಚಂದಮಾಮ


ಹರಿಹರಬ್ರಹ್ಮಾಮರೇಂದ್ರಾ|
ದ್ಯರ ಹೆಸರ
ದಿವ್ಯಾಸ್ತ್ರಮಂತ್ರವ|.ನೊರೆದನಾಚಮನೀಯ
ಸಾಂಗೋಪಾಂಗಮುದ್ರೆಯಲಿ||
ವರವನಿತ್ತನು ಶಸ್ತ್ರದುಪಸಂ|ಹರಣವನು
ತನುರಕ್ಷಣೆಯ ವಿ|
ಸ್ತರದ ದಿವ್ಯತನುತ್ರಮಂತ್ರವನಾ ಕುಮಾರರಿಗೆ||
Scanned by CamScanner
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಅದೆ ಬರವು ತಾಟಕಿಯ ನೋಡೈ|
ಕದನಕರ್ಕಶರಾಮ ರಣದ|
ಭ್ಯುದಯಲೀಲಾರಂಭವಿದು ಭೂಭಾರ
ಭಂಜನೆಗೆ||
ಹೆದರದಿರು ಚಿತ್ತದಲಿ ಬಾಣವ|
ಹೆದೆಗೊಳಿಸು ರಕ್ಕಸಿಯ ಜೀವವ|
ನೊದೆದುಹಾಯ್ಕೆಂದೆನಲು ನಗುತಿಂತೆಂದನಾ
ರಾಮ||
ಚಿತ್ರ ಶಂಕರ್ ಚಂದಮಾಮ




ಆವ ಬಲು ಬಿಲು ಜಾಣತನದ ಮ|
ಹಾ ವಿಚಿತ್ರಪ್ರೌಢಿಯೋ ದಿಟ|
ದೇವನಲ್ಲಾ ಮೇಲೆ ದೈತ್ಯಾಂತಕನಲಾ ರಣಕೆ||
ಆವುದರಿದಾತಂಗೆ ಗಗನದ|
ದೇವತತಿ ಕೊಂಡಾಡೆ ತಲೆ ಘನ|
ರಾವದಲಿ ನೆಲಕುರಳಲೆಚ್ಚನು
ಘೋರತಾಟಕಿಯ||
ಚಿತ್ರ ಶಂಕರ್ ಚಂದಮಾಮ


ಕಳಿದರಿವರೆಲೆ ಕೇಳು ಕುಶ ತ|
ತ್ಕಲುಷಕಾಂತಾರವನು ತನ್ಮುನಿ|ತಿಲಕ ಹೊಕ್ಕನು
ಬಳಿಕ ಘನಪಾವನ ತಪೋವನವ||
ಲಲಿತಪುಣ್ಯ ಮಹೀಜಕುಲ ಮಂ|
ಜುಳಲತಾ ಸೌರಭ್ಯಕುಸುಮೋ|
ಚ್ಚಳಿತ ಚಲಿತಸಮೀರನುತ ವಿಶ್ರುಮ
ಮಹಾಶ್ರಮವ||

ಚಿತ್ರ ಶಂಕರ್ ಚಂದಮಾಮ



ರಾಮ ಕೇಳಿವರಿಂದಲದಿತೀ|
ಭಾಮಿನಿಗೆ ಜನಿಸಿದನು ಹರಿ ವರ|
ವಾಮನಾಕೃತಿಯಿಂದ ದೈತ್ಯಬಲೀಂದ್ರನಧ್ವರದ||
ಹೋಮವನು ಕೆಡಿಸಿದನು ಬಳಿಕೀ|
ಭೂಮಿಯನು ಕೊಂಡಾಗಲಾ ಸು|
ತ್ರಾಮಗೊಡರಿಸಿದಂದವನು ವಿರಚಿಸಿದನಾ
ಮುನಿಪ||

ಚಿತ್ರ ಶಂಕರ್ ಚಂದಮಾಮ



ಆದರೆಯು ಬ್ರಹ್ಮವನು ಮರೆಗೊಂ|
ಡೈದಿದರ ವಧಿಸುವುದು ಲೌಕಿಕ|
ವೈದಿಕದ ಮತವಲ್ಲ ಮನುಕುಲದವರ ಪಥವಲ್ಲ||
ಹೋದ ಮೈಯಲಿ ಹೋಗಲೆನುತ ಕೃ|
ಪೋದಯನು ನಗುತನಿಲಶರದಿಂ|
ದೂದಿದನು ಜಲನಿಧಿಯ ತೆಂಕಣತೀರಕಾ
ಖಳನ||

ಚಿತ್ರ ಶಂಕರ್ ಚಂದಮಾಮ



ಕಲಿತರಿವರಾ ಮುನಿಯ ಶಿಕ್ಷೆಯ|
ಸುಲಭತೆಯಲಖಿಳಸ್ತ್ರಶಸ್ತ್ರದ|
ವಿಲಸದಭಿರಂಜನೆಯನಲ್ಲಿಂ ಮೇಲೆ
ಮುನಿಪತಿಯ||
ಬಳಿಗೆ ಬಂದರು ಜನಕಭೂಪನ|
ಬಳಿಯ ಮಣಿಹಾರರು ಮಹಾಮಂ|
ಗಳೆಯ ವಿಮಲವಿವಾಹಪತ್ರಿಕೆ ಸಹಿತ
ವಹಿಲದಲಿ||
ಚಿತ್ರ ಶಂಕರ್ ಚಂದಮಾಮ




ಶುಭಮುಹೂರ್ತದೊಳಾ ತಪೋಧನ|
ವಿಭು ಸರಾಗದಿನರ್ಕವಂಶ|
ಪ್ರಭವರುಗಳೊಡಗೂಡಿ ಹೊರವಂಟನು
ನಿಜಾಶ್ರಮವ||
ಇಭ ಶರಭ ಶಾರ್ದೂಲ ಹರಿ ಸೈ
ರಿಭ ಕುರಂಗ ವರಾಹ ಸೇವಿತ|
ದಭಿನವದ ಕಾನನವ ಕಳೆದೈದಿದರು ಕೌಶಿಕೆಯ||
ಚಿತ್ರ ಶಂಕರ್ ಚಂದಮಾಮ



ಈ ವಿಪುಳ ನದರಾಜನನ್ವಯ|
ವಾವುದೆನೆ ಕೌಶಿಕೆಗೆ ಗಂಡನು|
ಭಾವನೆಮಗಹನೀತ ಸತಿ ನದಿಯಾಗೆ ನದನಾದ||
ದೇವರಾಘವ ಕೇಳೆನುತ ಮುನಿ|
ನಾವೆಯಿಂದುತ್ತರಿಸಿ ಹಲವು ವ|
ನಾವಳಿಯ ಕಳಿದೈದಿದರು ಗಂಗಾತರಂಗಿಣಿಯ||
ಚಿತ್ರ ಶಂಕರ್ ಚಂದಮಾಮ



ತರುಣಕೇಳಾದಿಯಲಿ ಸಗರನ|
ಸಿರಿಗೆ ಸೇರದೆ ಶಕ್ರನಾ ಕ್ರತು|
ತುರಗವನು ಕದ್ದೊಯ್ದು ಕಪಿಲ
ಮುನೀಂದ್ರನೊತ್ತಿನಲಿ||
ಇರಿಸಿದನು ಪಾತಾಳದಲಿ ಬಳಿ|
ಕರಸಿ ಕಂಡರು ಸಗರನಂದನ|
ರುರಿಯೊಳದ್ದರು ಮುನಿಯ ಧಿಕ್ಕರಣೆಯ
ವಿಘಾತಿಯಲಿ||
ಚಿತ್ರ ಶಂಕರ್ ಚಂದಮಾಮ



ಧಗಧಗಿಸಿದರುವತ್ತು ಸಾವಿರ|
ಸಗರರನು ಸಂಸ್ಕಾರಮುಖದಲಿ|
ತೆಗೆಯಲೋಸುಗ ತಪದಲಿದ್ದನು
ಕಮಲಗರ್ಭಂಗೆ||
ಮಿಗೆ ಭಗೀರಥನಿಳುಹಿದನು ಸುರ|
ಜಗತಿಯಿಂ ಪಾತಾಳಕೀ ತ್ರೈ|
ಜಗಕೆ ಮಾತೆ ಕಣಾ ಹರಿಸ್ಮರಹರರು ಹೊರತಾಗಿ||

ಚಿತ್ರ ಶಂಕರ್ ಚಂದಮಾಮ



ರಾಮ ಕೇಳೀ ವ್ಯೋಮನದಿಯ ಮ|
ಹಾಮಹಿಮೆಗವಧಿಯನು ಕಾಣೆನು|
ಸೋಮಧರನೇ ಬಲ್ಲನಲ್ಲದೆ ಬೇರೆ ಮಾತೇನು||
ಕಾಮಿಸಿದ ಫಲವಹುದು ನೆನೆದರಿ|.ಗೀ
ಮರುತ್ಪಥಗಾಮಿನಿಯನೆನು|
ತಾಮುನಿಪ ಬರೆ ಸೊಗಸಿದುದು ಸುಮತಿಯ
ಜನಸ್ಥಾನ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ರಾಮಕೇಳೀ ವ್ಯೋಮನದಿಯ ಮ|
ಹಾಮಹಿಮೆಗವಧಿಯನು ಕಾಣೆನು|
ಸೋಮಧರನೇ ಬಲ್ಲನಲ್ಲದೆ ಬೇರೆ ಮಾತೇನು||
ಕಾಮಿಸಿದ ಫಲವಹುದು ನೆನೆದರಿ|
ಗೀ ಮರುತ್ಪಥಗಾಮಿನಿಯನೆನು|
ತಾ ಮುನಿಪ ಬರೆ ಸೊಗಸಿದುದು ಸುಮತಿಯ
ಜನಸ್ಥಾನ||

ಚಿತ್ರ ಶಂಕರ್ ಚಂದಮಾಮ


ಪರವಧೂವ್ಯಸನದಲಿ ಕೆಡರಾ|
ರರಸ ರಾಘವ ಕೇಳು ಕೆಟ್ಟುದು|
ಪುರುಷತನವಿಂದ್ರಂಗಹಲ್ಯಾದೇವಿ ಶಿಲೆಯಾಗಿ||
ಧರಿಸಿದಳು ನಿಜತನುವನಾ ಪ್ರ|
ಸ್ತರವಿದೀಗಾ ಸತಿಗೆನುತ ಹ|
ತ್ತಿರಕೆ ಬರೆ ರಾಮಾಂಘ್ರಿರಜವಾವರಿಸಿತಾ
ಶಿಲೆಯ||
ಚಿತ್ರ ರಾಜಿ ಚಂದಮಾಮ



ಗುರುಕಟಾಕ್ಷ ನಿರೀಕ್ಷೆಯಲಿ ದು|
ಸ್ತರ ಭವಾಂಬುಧಿ ಬರುವವೊಲು ರವಿ|
ಕಿರಣದವಲೋಕನದೊಳಡಗುವ
ತಿಮಿರಲತೆಯಂತೆ||
ಪರಮಪುರುಷನ ದೃಷ್ಟಿಪಾತದಿ|
ನಿರದೆ ಸಂಚಿತ ಸಕಲ ದುಷ್ಕೃತ|
ಹರೆದುದಿಸಿದಳು ಶಿಲೆಯ ಮಧ್ಯದೊಳಬಲೆ
ಗೌತಮನ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಬಂದನಾ ಸಮಯದಲಿ ಗೌತಮ|
ನಿಂದಿರೇಶನ ಮನುಜವೇಷದ|
ಸಂದಸಮ್ಯೃಜ್ಞಾನಮುಖದಲಿ ನಮಿಸೆ ಬಳಿಕವರ||
ಒಂದುಗೂಡಿ ಕೃತಾರ್ಥರಿವರಿ|
ನ್ನೆಂದು ಕೌಶಿಕನವರನಾ ದಳ|
ಮಂದಿರದಲೇ ನಿಲಿಸಿ ಬಂದರು
ಮಿಥಿಳೆಗೊಲವಿನಲಿ||
ಚಿತ್ರ ಶಂಕರ್ ಚಂದಮಾಮ



ವರವಸಿಷ್ಠ ವಿವಾದವನು ಭೂ|
ವರ ಋಷೀಶ್ವರನಾದ ಬಹಳಾ|
ಶ್ಚರಿಯದುಗ್ರತಪಃಪ್ರಭಾವವನಾ ತ್ರಿಶಂಕುವಿಗೆ||
ಸುರಪುರದ ಬೇರಭ್ರದಲಿ ವಿ|
ಸ್ತರಿಸಿದಾಖ್ಯಾನವನು ಜನಕಂ|
ಗೊರೆದು ಕೊಂಡಾಡಿದನು ಕೌಶಿಕನನು
ಶತಾನಂದ||

ಚಿತ್ರ ಶಂಕರ್ ಚಂದಮಾಮ


ವರಮುನಿಪ ಲಾಲಿಸೈ ತುರಗಸದತಮನ್ನೀವೆ|
ಕರಿ ರಥವ ಪಂಚಶತ ಸುರಭಿ ಸಾಹಸ್ರಮಂ|
ಭರಿತಧನಧಾನ್ಯಗಳನನುಚರರ ಸಪ್ತಶತ
ಹರುಶದಿಂ ಕೊಡುತಿರ್ಪೆನು||
ಕರುಣದಿಂ ಧೇನುಮಂ ತ್ವರಿತದಿಂದೀಯೆನಲ್|
ಭರಿತಚಿಂತೆಯಿನಾಗ ಮುನಿಪನುಸುರಿದನೆನ್ನ|
ಸುರಭಿಯಂ ಕೊಡೆನೀಗ ಪುರಕೆ ತೆರಳೆಂದೆನಲ್
ಪರಮರೌದ್ರದಿ ಜನಪನು||

ಚಿತ್ರ, ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಮುನಿಪ ಚಿತ್ತೈಸಹುದು ನೀವೆಂ|
ದಿನಿತು ಪೂರ್ವದ ರಾಜಸೂಯದ|
ವಿನುತ ಮಖಭೂಮಿಯನುಮಿಯನು
ಶೋಧಿಸಲಲ್ಲಿ ಲಾಂಗಲದ||
ಮೊನೆಗೆ ಸಿಲುಕಿದ ಭೂಗತಾಲಯ|
ವನರುಹಾಕರವಿರಲು|
ಕನಕಕಮಲದ ಕರ್ಣಿಕಾಮಧ್ಯದಲಿ
ಕೋಮಲೆಯ||

ಚಿತ್ರ ಶಂಕರ್ ಚಂದಮಾಮ



ಭೀತಿ ಬೇಡೆಲೆ ಜನಕ ಜೀವನ|
ಜಾತಮಂದಿರೆಯೀಕೆಯೀಕೆಯ|
ನೋತು ಸಲಹೆಂದಿತ್ತನಾ
ಮುನಿನಾಥನೊಲವಿನಲಿ||
ಸೀತೆಯೆಂದೇ ನಾಮಕರಣವ|
ನಾತಮಾಡಿಸಿ ಬಳಿಕ ಘನ ಸಂ|
ಪ್ರೀತಿವಚನದಲೊರೆದನಧಿಗತ
ಕಾರ್ಯವಿಸ್ತರವ||
ಚಿತ್ರ ಶಂಕರ್ ಚಂದಮಾಮ



ಎಳೆಯ ಕಬ್ಬಿನಕೋಲ ವನಕರಿ|
ಕಳಭ ಕರದಲಿ ಮುರಿವವೊಲು ನಿರಿ|
ನಿಳಿಲುನಿಟಿಲೆಂಬಬ್ಬರಣೆ ಗಬ್ಬರಿಸೆ ದಿಗುತಟವ||
ಸೆಳೆದನಾಕರ್ಣಾಂತಪರಿಯಂ|
ತಲಘುಬಲ ರಘುನಾಥನಿಕ್ಕಡಿ|
ಗಳೆದುದಾ ಬಲುಬಿಲ್ಲು ಬೆದರಲು ಹೃದಯ
ಭಾರ್ಗವನ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಚಿತ್ರ ಎಂಟಿವಿ ಆಚಾರ್ಯ ಚಂದಮಾಮ



ಬಳಿಕ ಮಧುಪರ್ಕಾದಿ ವೈದಿಕ|
ವಿಲಸದಭಿರಂಜನೆಯಲಾ ಕಳ|
ಕಳವ ಮಾಣಿಸುತಿತ್ತರುತ್ತಮ ಗುಡವ
ಜೀರಿಗೆಯ||
ನಿಲಿಸಿ ಮೆಟ್ಟಕ್ಕಿಯಲಿ ಮದವ|
ಕ್ಕಳಿಗೆ ಕನ್ಯಾವರಣವಾದವು|
ಘಳಿಗೆವಟ್ಟಲ
ಲಗ್ನದೋಂಪುಣ್ಯಾಹರಚನೆಯಲಿ||
ಚಿತ್ರ ಶಂಕರ್ ಚ



ಇಳೆಯಮಗಳನು ರಾಘವಂಗೂ|.ರ್ಮಿಳೆಯನಾ
ಸೌಮಿತ್ರಗುಳಿದರಿ|
ಗುಳಿದನುಜತನುಜೆಯರ ಧಾರೆಯನೆರೆದನಾ
ಜನಕ||
ಸುಳಿದರಾ ದಂಪತಿಗಳುರುಮಂ|
ಜುಳದ ಮಣಿವೇದಿಕೆಗೆ ಹೋಮಾ|
ನಲನ ಬಲವಂದೆಡಕೆ ಸಾರಿದವರ ಪತ್ನಿಯರು||
ಚಿತ್ರ ಶಂಕರ್ ಚಂದಮಾಮ



ಉಲುಹುದೆಗೆದಿಂಗುವ
ಸಮುದ್ರದ|.ಸಲಿಲದವ್ರೊಲಾಯ್ತುಖಿಳ ಸೇವಾ|
ಜಲಧಿ ಕಾಣೆನು ಮಲೆವ ಮಹಿಪರ ಮುನಿಯ
ಮುಂಬಿನಲಿ||
ಕಳಚಿತರಸನ ಮನದ ಧೈರ್ಯಾ|
ಚಲದ ಬೈಸಿಕೆ ಹದನನದ ಕಂ|
ಡಲಘುಭುಜಬಲ ರಾಮ ನಿಂದನು ಮುಂದೆ
ಭಾರ್ಗವನ||
ಚಿತ್ರ ಶಂಕರ್ ಚಂದಮಾಮ



ಆಳಿದನು ರಾಮನ ವಿವಾಹದ|
ಮೇಲೆ ಹನ್ನೆರಡಬುದ ಪರಿಯಂ|
ತೋಲಗಿಸಿಕೊಂಡಖಿಳರಾಯರನವನಿಮಂಡಳ
ವ||
ಕ್ಷಿತಿಸುತಾಸುತ ಕೇಳು ಬಳಿಕ|
ಚ್ಯುತನ ಮಾಯಾನರನನವನೀ|
ಪತಿಯ ಪಟ್ಟಕೆ ಪರುಠವಿಸಿದರು ಕರೆಸಿ
ಜೋಯಿಸರ||.ಚಿತ್ರ ಶಂಕರ್ ಚಂದಮಾಮ



ಮೇಲೆ ಮುದದಲಿ ಕೌಶಿಕಾಧ್ವರ|
ಪಾಲಕನ ನಿಜನಿಳಯಕಾ ಭೂ|
ಪಾಲಕನು ಕಳುಹಿದನು ಕಮಲಾಸನನ
ನಂದನನ||
ನಾಳೆ ರಘುನಾಥಂಗೆ ರಾಜ್ಯ|
ಶ್ರೀಲತಾಂಗಿಯ ಮದುವೆ ಮಂಗಳ|
ದೇಳಿಗೆಯ ಸುವ್ರತವ
ಮಾಡಿಸಲುಚಿತವಚನದಲಿ||
ಚಿತ್ರ ಶಂಕರ್ ಚಂದಮಾಮ



ನಿವಡಿಸಿದ ವೈಶಾಖಮಾಸದ|
ಧವಳಪಕ್ಷದ ಪಂಚಮಿಯ ಶುಭ|
ದಿವಸದಭಿಜಿಲ್ಲಗ್ನದಲಿ ಮೂರ್ಧಾಭಿಷೇಚನದ||
ವಿವರವಾಯ್ತು ವಿದೇಹಜಾಪತಿ|
ಗವನಿಪನ ಬರುಬಯಕೆಯಲಿ ಮರು|
ದಿವಸ ಮತ್ಸರಿಸಿತ್ತು ಪುರವು ಪುರಂದರನ
ಪುರವ||

ಚಿತ್ರ ಶಂಕರ್ ಚಂದಮಾಮ



ಅಂದಿನುದಯದಲವಳು ಕೈಕೆಯ|
ಮಂದಿರಕೆ ನೃಪಸಭೆಯೊಳಿದ್ದೈ|
ತಂದಳಾ ಸೈಳೇಂದ್ರಿವೇಷದ ಮಾಯೆ
ವಹಿಲದಲಿ||
ಕಂದನಿಕ್ಕುವೆನವನಿಪನ ಮನ|
ಸಂದ ಮೋಹದ ಮಾನಿನಿಗೆ ಮನು|
ನಂದನನನೆಬ್ಬಟ್ಟುವೆನು ರಾವಣನ ವಧೆಗೆನುತ||
ಚಿತ್ರ, ಶಂಕರ್ ಚಂದಮಾಮ


ಧರೆಯೊಳಗೆ ವೈರಿಗಳು ಬೇರೊ|
ಬ್ಬರೆ ನಿತಂಬಿನಿ ಕೇಳು ಸಾಪ|
ತ್ಯರು ಕಣಾ ಕಡುವಗೆಗಳುಳಿದವರಲ್ಪವೈರಿಗಳು||
ಧರಣಿ ರಾಮಂಗಾಗೆ ಕೌಸಲೆ|
ಸರಕು ಮಾಡುವಳೇ ಸಮಶ್ರೀ|
ವೆರಸಿ ಬದುಕಿದ ನಿನ್ನನೆಂದಳು ನಗುತ
ಸೈಳೇಂದ್ರಿ||
ಚಿತ್ರ ಶಂಕರ್ ಚಂದಮಾಮ



ಅರಸಿ ಕೇಳಿನ್ನೇನ ಹೇಳುವೆ|
ನರಸ ಮನದಲಿ ನೆನೆದ ಮಂತ್ರದ|
ಪರಿಯ ನೀನದನರಿತುದಿಲ್ಲವಲಾ ಮಹಾದೇವ||
ಧರಣಿ ಗಡ ರಾಮಂಗೆ ಭರತಾ|
ದ್ಯರುಗಳಾ ರಘುನಂದನಗೆ ಕಿಂ|ಕರರು ಗಡ
ಕೇಳರಸಿ ಕೌತುಕ ನಡೆದುದಿಂದಿನಲಿ||
ಚಿತ್ರ ಶಂಕರ್ ಚಂದಮಾಮ



ಹುಟ್ಟಿದುದು ಬಳಿಕಾಯತಿಕೆ ಗರಿ|
ಗಟ್ಟಿ ತಗ್ಗದಸೂಯೆ ಮನ ಕವ|
ಲಿಟ್ಟುದಾಕಾಂಕ್ಷೆಯಲಿ ರಾಜ್ಯಶ್ರೀನಿತಂಬಿನಿಯ||
ನೆಟ್ಟ ನೇಹದಲವಳು ನುಡಿಗೊಡ|
ಬಟ್ಟಳೈ ಕುಶ ಕೇಳು ಮಾಯೆಯ|
ಕಟ್ಟಿಗೊಳಗಾಗದರದಾರಭವಾದಿ ದೇವರಲಿ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಲಲನೆಯಿದ್ದಳು ಮಲಿನಮಯ ಪು|
ತ್ಥಳಿಯವೊಲು ಹೇಮಂತಕಾಲದ|
ನಳಿನಿಯಂತೆ ನಿದಾಘದೆಳಲತೆಯಂತೆ
ರಾಹುವಿನ||
ಎಳತಟದ ಶಶಿಲೇಖೆಯಂತು|
ಜ್ವಲತೆಗುಂದಿದ ಮುಖದಕಾಂತಿಯ|
ಹಳಹಳಿಕೆ ಹಳುವಾದ ಕೈಕೆಯ ಕಂಡನಾ ಭೂಪ||
ಚಿತ್ರ ರಾಜಾ ರವಿವರ್ಮ



ಮನದ ಬಯಕೆಯದೇನು ಹೇಳದ|
ನಿನಗೆ ಸಲಿಸುವೆನಂಜಿಕೆಯ ಬಿಸು|
ಟನುಕರಿಸು ನಿನ್ನಿಷ್ಟವಾವುದು ಕೊಟ್ಟೆನದ ಬೇಡ||
ತನುಜ ರಾಘವನಾಣೆಯೆನೆ ಮೆ|
ಲ್ಲನೆ ಮುಖೇಂದುವ ಮುರಿದು ನೃಪನಾ|
ನನವನೀಕ್ಷಿಸುತಬಲೆ ನಗುತಿಂತೆಂದಳರಸಂಗೆ||

ಚಿತ್ರ ಶಂಕರ್ ಚಂದಮಾಮ



ಯುವತಿಯರ ಗುಜುಗುಜಿನ ಶೂನ್ಯೋ|
ತ್ಸವದ ನೃಪಮಂದಿರದ ಜಾಢ್ಯದ|
ಜವನಿಕೆಯ ಜಂಜಡವ ಕಾಣುತ
ನುಡಿದನಿಂತೆಂದು||
ಅವನಿ ನಮಗಸ್ವಾಮ್ಯವೆಂಬೀ|
ವ್ಯವಹರಣೆ ಗೋಚರಿಸುತಿದೆ ಸಂ|
ಭವಿಸಲುತ್ತರವೆಂದನಾ ರಘುಪತಿ
ಸುಮಂತ್ರಂಗೆ||
ಚಿತ್ರ ಶಂಕರ್ ಚಂದಮಾಮ



ವಿತತಗಲಕಿತಾಶ್ರುಪ್ರಕರ ಪೂ|
ರಿತ ನಿಮೀಲಿತನೇತ್ರನನು ನಿ|
ರ್ಗತ ವಚೋವಿಹ್ವಲನ
ಶೋಕೋದ್ರೇಕಪರವಶನ||
ಸತಿಯ ಕರ್ಕಶಕಲುಷವಾಕ್ಯರ|
ಹತಿನಿರೋಧಿತ ಹೃದಯಬಾಧಾ|ನ್ವಿತನ ಕಾಣುತ
ಕೈಯ ಕದಪಿನಲಿರ್ದನಾ ರಾಮ||

ಚಿತ್ರ, ಶಂಕರ್ ಚಂದಮಾಮ



ಎನಗೆ ಬೆಸಸಿದೊಡೆ ಸಾಲದೆ |
ಜನನಿಯರೀ ಧರೆಯನೆನ್ನ ತಮ್ಮಂಗಾನೀ||
ಯೆನೆ ಬೇಡವೇಳ್ಪುದೇ ಮ|
ಜ್ಜನಕನನಿಲ್ಲಿವರಮಿಂತಿದಸವುದು ಗಹನಂ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಅಡೆವೊತ್ತೆ ಕೋಪಶಿಖಿ ಕ|
ಣ್ಕಿಡಿಯಂ ಕೆಂಡಮುಮನುಗುಳೆ ಪುರ್ವರ್ವಿಸೆ
ಮೇ|
ಗಡರ್ವ ಪೊಗೆಯಂತೆ ಕೃಷ್ಣಂ|
ಕಡೆಗಾಲದ ಧೂಮಕೇತುವೊಲಿರ್ದಂ||
ಪಂಪ,ಚಿತ್ರ ಶಂಕರ್ ಚಂದಮಾಮ



ಏನುಪಾಯವು ನಿಮ್ಮ ತಮ್ಮನು|
ಮಾನವಾವುದಿದಕ್ಕೆ ಯೋಚನೆ|
ಗೇನು ಹದನನು
ಕಂಡಿರೆಂದವರೊಬ್ಬರೊಬ್ಬರಲಿ||
ಹೀನವಿದು ಮಧ್ಯಮವಿದುತ್ತಮ|
ಸಾನುಮತವಿದು ಸಾಕು ನಮ್ಮನು|
ಮಾನವಿಂದಿಂತೆಂದು ನಿಶ್ಚೈಸಿದರು ನಿಜಮತವ||

ಚಿತ್ರ ಶಂಕರ್ ಚಂದಮಾಮ



ಕ್ರಮಮಂ ನೋಡದೆ ನಂಟರಂ ತೊರೆದು ನಾಡಂ
ಬಿಟ್ಟು ಸಪ್ತಾಂಗ ರಾ|
ಜ್ಯಮನೀಡಾಡಿ ಸಪತ್ನನಂ ನಿಲಿಸಿ
ಸಿಂಹಾಸಂದಿಯೊಳ್ ತಾಯ್ಗೆ ದುಃ|
ಖಮನುತ್ಪಾದಸಿ ಪೋಪುದಾವುದುಚಿತಂ
ಪಿಂತಿರ್ಪುದಿಲ್ಲುಯ್ವುದೆ|
ಮ್ಮುಮನೆಂದಂಬಿಕೆ ಮೆಯ್ಯನೊಕ್ಕು
ವಿಗಳದ್ಬಾಷ್ಪಾಂಬುವಂ ತೇಂಕಿದಳ್||

ಪಂಪ,ಚಿತ್ರ ಶಂಕರ್ ಚಂದಮಾಮ


ಬೇಡ ನೀ ಸುಕುಮಾರಿ ನಮ್ಮೊಡ|
ನಾಡುವರೆ ಕಡುಬಿರಿಸು ಕಾನನ|ವಾಡುವರು
ನಿಮ್ಮವರು ನಮ್ಮನು ಲೋಕ ದುರ್ಜನಕೆ||
ಬೇಡವೀ ಮಾತಕಟ ನಮ್ಮೊಡ|
ನಾಡದಿರು ಕೌಸಲೆಯ ಸೇವೆಯ|
ಮಾಡಿಕೊಂಡಿರು ಸಾಕು
ಬಂದವಳೆಂದನವನಿಜೆಯ||
ಚಿತ್ರ ಶಂಕರ್ ಚಂದಮಾಮ


ದೇವ ಬಿನ್ನಹ ನಿಮ್ಮ ದೇಹದ|
ಮೈವಳಿಯ ನೆಳಲಾನಲಾ ನೀ|
ವೇ ವಿಚಾರಿಸಿ ತನಗೆ ಬೇರನ್ಯತ್ರ ಗತಿಯುಂಟೆ||
ಹೂವ ಸುರಭಿ ಸುಧಾಂಶುಬಿಂಬವ|
ನಾ ವಿಮಲರುಚಿ ಕೀರ್ತಿ ಸದ್ಧ|
ರ್ಮಾವಳಿಯ ಬಿಟ್ಟಿರಲು ಬಲ್ಲವೆಯೆಂದಳಾ
ಸೀತೆ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ಬೇಡ ನೀ ಸುಕುಮಾರಿ ನಮ್ಮೊಡ|
ನಾಡುವರೆ ಕಡುಬಿರಿಸು ಕಾನನ|
ವಾಡುವರು ನಿಮ್ಮವರು ನಮ್ಮನು
ಲೋಕದುರ್ಜನಕೆ||
ಬೇಡವೀಮಾತಕಟ ನಮ್ಮೊಡ|
ನಾಡದಿರು ಕೌಸಲೆಯ ಸೇವೆಯ|
ಮಾಡಿಕೊಂಡಿರು ಸಾಕು
ಬಂದವಳೆಂದನವನಿಜೆಯ||

ಚಿತ್ರ ಶಂಕರ್ ಚಂದಮಾಮ



ಏನಾನುಮನಿತ್ತು ಕೆಲರ್|
ದಾನಗುಣಕ್ಕುಂತೆ ಬೆಸೆವರಯ್ಯನ ಸತ್ಯ||
ಕ್ಕೇನಯ್ಯ ರಘುಜನಂತಂ|
ಬೋನಿಧಿ ವಳಯಿತಮನಿಳೆಯನಿತ್ತವನಾವಂ||
ಚಿತ್ರ, ಶಂಕರ್ ಚಂದಮಾಮ



ತರಣಿವಂಶಪರಂಪರೆಯ ಭೂ|
ವರರಿಗವನಿಯ ಪಟ್ಟ ಜ್ಯೇಷ್ಠರಿ|
ಗುರುವುದಲ್ಲದೆ ಬೇರೆ ಸಲ್ಲದು ತತ್ವನಿಷ್ಠರಿಗೆ||
ಹಿರಿದು ನಾವ್ ಸೈರಿಸಿದಡಂಜದೆ|
ಧರಣಿಸುತೆ ವಲ್ಕಲವನುಡುವುದ|
ಕುರಿಸಲಹುದೇಯೆನುತ ಕಿಡಿಕಿಡಿಯೋದನಾ
ಮುನಿಪ||

ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಬಳಿಕಬುಧಿ ಪರಿವಳಯದವನೀ|
ತಳದ ರಾಯರ ರಾಜವೈಭವ|
ನಿಳಯವನು ವೈಶಾಖ ಸಿತ ಪಂಚಮಿಯ
ದಿವಸದಲಿ||
ಘಳಿಗೆ ಹದಿನಾರರಲಿ ಪುಷ್ಯದ|
ಸುಳಿವಿನುಚ್ಚಗ್ರಹದ ದೃಷ್ಟಿಯ|
ಲಿಳೆಯಮಗಳೂರ್ಮಿಳೆಯ ವಲ್ಲಭಸಹಿತ
ಹೊರವಂಟ||
ಚಿತ್ರ ಶಂಕರ್ ಚಂದಮಾಮ



ಅಂದಿನಿರುಳನು ಕಳೆದು ಬಳಿಕರ|
ವಿಂದಸಖನುದಯದಲಮಾತ್ಯಂ|
ಗೆಂದನಾ
ರಘುನಾಥನಾಗತಕಾರ್ಯದನುನಯವ||
ತಂದೆಯೇನಾಗಿಹನೊ ಭರತನು|
ಬಂದುದಿಲ್ಲಾಪ್ತರುಗಳಯ್ಯನ|
ಮುಂದಿರರು ನಡೆ ಪಿತನನಾರೈ ಹೋಗು
ನೀನೆಂದ||



ಮರೆವಮಗನೇ ಮರುಳಲಾ ಮಹಿ|
ಗುರುವ ಸುಕುಮಾರಕನ ಕಾನನ|
ಕುರುಬಿ ಸಂತೈಸಿದಡೆ ನಿಲುವುದೆ ಮನವು ವಿಧಿ ನಮಗೆ||
ಕರಬನಾದೆನು ಕಯ್ಯಮೇಲೆ|
ಚ್ಚರಿಸಿತಕಟಾ ಪುತ್ರವಿರಹದ|
ಮರುಕದೂರುಜತಾಪಸರ ಬಲುಶಾಪ ತನಗೆಂದ||
ಚಿತ್ರ ಶಂಕರ್ ಚಂದಮಾಮ



ಒಡನೆ ದಶರಥನ ಕಣ್ಗಳ್|
ನಡೆದುವು ಕಣ್ಣೊಡನೆ ತಳರ್ದು ನಿಲ್ಲದೆ
ಮನಮುಂ||
ನಡೆದುದದರೊಡನೆ ನಿಡುಸುಯ್|
ನಡೆದುದು ಸುಯ್ಯೊಡನೆ ನೃಪತಿ ಮೂರ್ಛೆಗೆ
ಸಂದಂ||

ಚಿತ್ರ, ಶಂಕರ್ ಚಂದಮಾಮ



ಅಳಿದ ಮಗನೋಪಾದಿ ನಿಮ್ಮನು|
ಸಲಹುವೆನು ನಂಬುವುದು ನೀವೆನ|
ಲಲಸಿ ಬಳಿಕಸುವಿಡಿಯಲೊಲ್ಲದೆ
ಸುತವಿಯೋಗದಲಿ||
ಅಳಿವು ಸಮನಿಸಲೆನುತ ನಳಿನಜ|
ನಿಳಯಕಭಿಮುಖರಾದರನಿಬರು|
ಜಳನ ಸಂಸ್ಕೃತಿಯಿಂದ
ಮಾಡಿದೆನೂರ್ಧ್ವದೇಹಿಕವ||
ಚಿತ್ರ ಶಂಕರ್ ಚಂದಮಾಮ



ಬಂದು ಕಂಡನು ಗುಹನು ಚರಣ|
ದ್ವಂದದಲಿ ಚಾಚಿದನು ಪರಮಾ|
ನಂದಭಕ್ತಿಯಲುಪಚರಿಸಿದನು ರಾಘವೇಶ್ವರನ||
ಮುಂದೆ ಜಾವದ ಮೇಲೆ ನಾವೆಗ|
ಳಿಂದ ನದಿಯನು ದಾಂಟಿ ಬಳಿಕ|
ಲ್ಲಿಂದ ತೆರಳಿದರಿವರು ಮೂವರು
ಕಾಲುನಡೆಗಳಲಿ||
ಚಿತ್ರ ಶಂಕರ್ ಚಂದಮಾಮ


ಮನಮಂ ಕಾರಣ್ಯರಸಂ|
ತನುವಂ ರಾಘವನ ದೇಹರುಚಿ ಪುದಿಯೆ ಸುಧಾ||
ವನನಿಧಿಯೊಳ್ ಮುಳುಗಿದವ್ರೋ|
ಲನುರಕ್ತಂ ಮುಂದೆ ಮುಗಿದ ಕೈವೆರಸಿರ್ದಂ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಮೊಗಕೆ ಮುತ್ತುಗದೆಲೆಯ ಮರೆವಿಡಿ|
ದಗಲಿದುಮ್ಮಹದಿಂದ ಜನಕನ|
ಮಗಳ ನಡೆಸುತ ತಂದರೊಂದು
ಮಹಾಸರೋವರಕೆ||
ಝುಳದ ಧಗೆ ಡಾವರಿಸೆ ಹೊಕ್ಕರು|
ಕೊಳನ ಕರಚರಣಾನನಂಗಳ|
ತೊಳೆದು ಕುಡಿತೆಯಲೀಂಟಿದರು ನಿರ್ಮಳ
ಹಿಮೋದಕವ||
ಚಿತ್ರ ಶಂಕರ್ ಚಂದಮಾಮ



ಮೂರುದಿನದುಪ್ಪಯಣಕುದಕಾ|
ಹಾರವನಿಬರಿಗಾಯ್ತು ಕಳೆದರು|
ವಾರಿಜದ ಕಂದದಲಿ ಹಸಿವನು ನಾಲ್ಕನೆಯ
ದಿವಸ||
ಸಾರಿದರು ಜಾಹ್ನವಿಯ ಯಮುನೆಯ|
ಭಾರತಿಯ ಸಂಗಮದ ಮಧ್ಯದ|
ಪಾರಿಕಾಂಕ್ಷಿಪ್ರವರ ಭಾರದ್ವಾಜನಾಶ್ರಮವ||
ಚಿತ್ರ ಶಂಕರ್ ಚಂದಮಾಮ



ಅಂದಾ ಪರ್ವತದಲ್ಲಿ ವಾಸಿಸೆ ಸದಾ
ಸನ್ನದ್ಧನಾಗಿರ್ದು ತಾ|
ನೆಂದುಂ ಲಕ್ಷ್ಮಣನೊಲ್ದು
ಸೇವೆಯೆಸಗಲ್ಕಂದಂದಿನಾ ಸೌಖ್ಯಮಂ||
ಮಂದಂಮಂದಮೆನಲ್ನದೀಜಲದಿನೆಳ್ತಂದಿರ್ದ
ನಾದಂಗಳಂ|
ಮುಂದಾತೀರದೊಳೆಯ್ದಿದೆಮ್ಮಿರವವುಮಂ
ಚಿತ್ತಕ್ಕೆ ತಂದಪ್ಪೆಯೋ||

ಉತ್ತರ ರಾಮಾಯಣ, ಚಿತ್ರ ಶಂಕರ್
ಚಂದಮಾಮ



ರಾಯನಾಯುಷ್ಯಾವಸಾನದ|
ರಾಯಸವ ಬರೆಸಿದರು ಕೈಕೆಯ|
ರಾಯ ನಗರಿಗೆ ಕಳುಹಿದರು
ಬಳಿಕಾಪ್ತಗುಪ್ತಿಗರ||
ರಾಯದಶರಥನಸುವಿಸಂಚಿತ|
ಕಾಯವನು ನವತಪ್ತತೈಲದ|
ಲಾಯಸಂಬಡಿಸಿದರು ಮೇಧಿಸಿದರು
ಸುಗಂಧದಲಿ||
ಚಿತ್ರ ಶಂಕರ್ ಚಂದಮಾಮ



ಐಸೆ ಮತ್ತೇನೆಂದು ಕಲಿತ|
ಕ್ಲೇಶದನುತಾಪದಲಿ ಹೊರವಂ|
ಟಾ ಸುಮಿತ್ರಾಸೂನುಸಹ ಚತುರಂಗಬಕಸಹಿತ||
ವಾಸರತ್ರಯಕ್ಕೈದಿದನು ವರ|
ಕೌಸಲಾನಗರಿಯನು ಗತ ಭೂ|
ಮೀಶನಿದಿರಲಿ ಬಿದ್ದು ಹೊರಳಿದನಧಿಕ
ಶೋಕದಲಿ||

ಚಿತ್ರ ಶಂಕರ್ ಚಂದಮಾಮ

ಅನಯದಿನಪ್ಪ ಸಂಪದದಿ ನಿಲ್ಲಮೆ
ನಾಡೆಯುಮಿಂಬುವೆತ್ತುದೆಂ|
ತೆನೆ ಪಳಿವನ್ನರಿಲ್ಲ ಧನಮಿಲ್ಲದರಂ
ದುರಿತಾನುಬಂಧಮಿ|
ಲ್ಲನಯದಿನಪ್ಪುವೀಯೆರಡುಮೆಂಬುದನಿಂಬರಿ
ದೀವೆವೆಂಬಿರೆಂ|
ತೆನಗಧಿರಾಜ
ರಾಜ್ಯಮನಪೂಜ್ಯಮನಕ್ರಮದಿಂದಮಪ್ಪುದಂ||
ಪುದಿಯೆ ತಮಂ ಮನಮಂ ಮೋ|
ಹ ದವಾಗ್ನಿಯ ಧೂಮದಂತೆ ಕರಣ ಬಲ ಪ್ರಾ|
ಣದ ಚೇಷ್ಟೆಗೆಟ್ಟು ಭರತಂ|
ಪದಾನತಂ ವಿಕಲನಾಗಿ ಮೂರ್ಛೆಗೆ ಸಂದಂ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕೇಳಿದನು ಸುತವಿರಹದವನೀ|
ಪಾಲ ಮರಣವನಧಿಕ ಶೋಕ|
ಜ್ವಾಲೆ ದಳ್ಳಿಸಿತಗ್ರಜನ್ಮವಿಯೋಗವಿಶ್ರುತವ||



ಆಲಿಯಲಿ ಕಿಡಿಗೆದರಿ ದಾಸಿಯ|
ಮೇಲೆ ಮುಳಿದಳಿವಿಂಗೆ ಝುಡಿದನು|
ಭಾಳ ಬಳಿಕ ವಸಿಷ್ಠ
ಕಂಡಡಹಾಯ್ದನಾಯುಧಕೆ||



ಜರೆದು ಭರತಾನುಜನ ಖಡುಗವ|
ನೊರೆಗೊಳಿಸಿ ಧರ್ಮದ ರಹಸ್ಯವ|
ನರುಹಿ ಬಳಿಕ ಪರೇತಕೃತ್ಯದ ಪರಮವೈದಿಕದ||
ನಿರುಗೆಯಲಿ ಮಾಡಿಸಿದರಗ್ನಿಯ|
ಲೊರಗಿತ್ತೈನೂರರರಸಿಯರು ನೇ|
ಸರುಗುಲಾಧಿಪನೊಡನವರ್ಗಳಿಗಾಯ್ತು
ಸಂಸ್ಕಾರ||



ದಿವಸ ಹದಿಮೂರರಲಿ ಕೈಕಾ|
ಭವನನೊಡಬಡಿಸಿದರು ಮುನಿಪುಂ|
ಗವ ಸುಮಂತ್ರಕರರಸುತನಕೆ
ನೃಪಾಲಮತವಿಡಿದು||
ಅವನಿ ತಾಯ್ ರಘುನಾಥ ಪಿತನೆಂ|
ದವರ ಮಗುಳೊಡಬಡಿಸಿ ನೃಪ ನಗ|
ರವನು ಹೊರವಂಟನು ಕಕುಸ್ಥಾನ್ವಯನ
ದರುಶನಕೆ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಇರಿಸಿದನು ಪಟ್ಟಣಕೆ ರಕ್ಷಣೆ|
ಗೆರಡನೆಯ ಸೌಮಿತ್ರಿಯನು ನಾ|
ಲ್ವರು ಮಹಾಮಂತ್ರಿಗಳನನ್ವಯದಾಪ್ತ
ಪರಿಜನವ||
ಹರಿಸಿದನು ನಾನಾ ದಿಗಂತಕೆ|
ಚೈನಖಿಳಾರಣ್ಯ ನದಿ ದು|
ಸ್ತರ ಮಹೀಧರ ನಿಕರದೆಡೆಗೆರಸಲು
ನಿಜಾಗ್ರಜನ||

ಚಿತ್ರ ಶಂಕರ್ ಚಂದಮಾಮ



ಬಳಿಯಲೋಲೈಸುತ್ತಲವರನು|
ಕಳುಹಿದನು ಸುರಗರುತನೂಜನ|
ಬಳಿಗೆ ನೀವಾ ಮುನಿವಚೋವಿಸ್ತರ
ವಿಲಾಸಕವ||
ತಿಳಿವುದೆನೆ ಬಳಿಕಾ ಭರತ ನಿಜ|
ಬಲಸಹಿತ ಭಾಗೀರಥಿಯ ಹಾ|
ಯ್ದೊಲವು ಮಿಗಲೈತಂದನಾ ಮುನಿನಾಥನಿದ್ದೆಗೆ||

ಚಿತ್ರ ಶಂಕರ್ ಚಂದಮಾಮ


ಕೂಡೆ ಹೊರವಂಟುದು ಸುಮಂತ್ರಕ|
ಗೂಡಿ ಸಚಿವನಿಯೋಗಿಗಳು ಹೊರ|
ಬೀಡಬಿಟ್ಟುದು ಮುಂದೆ ಮನ್ನೆಯ
ಮಂಡಲೇಶ್ವರರು||
ಜೋಡಿಸಿದ ಕರಿತುರಗರಥವೆಡೆ|
ಯಾಡಿದವು ಗುಡಿ ಮಂಡವಿಗೆಗಳ|
ಹೂಡಿದೆತ್ತಿನ ಬಂಡೆಗಳು
ನಡೆಗೊಂಡವಗಲದಲಿ||

ಚಿತ್ರ ಶಂಕರ್ ಚಂದಮಾಮ


ಕೇಳಿಕೊಳುತಾ ಭರತನಧಿಕಕ್ಕ್ರ|
ಪಾಳುವನು ಕಾಂಬುಜ್ಜುಗದ ಪರಿ|
ಪಾಳಿಯಿಂದೈದಿದನು ಶೃಂಗೀವೇರಪುರವರವ||
ಪಾಳಯವನಿದ ಕಾಣುತಾ ಗುಹ|
ನಾಳು ಕುದುರೆಯ ಕೂಡಿ ಗಮನದ|
ಚಾಳಿಯಾವುದೊ ತಿಳಿಯಬೇಕೆನುತಲ್ಲಿಗೈತಂದ||
ಚಿತ್ರ ಶಂಕರ್ ಚಂದಮಾಮ



ಬಳಿಕ ಭಾರದ್ವಾಜಮುನಿ ಮನು|
ಕುಲದರಾಯನ ಚಿತ್ತಕೂಟಾ|
ಚಲಕೆ ಕಳುಹಿದ ಕದನ ಭರತಂಗೊರೆದು
ಬೀಳ್ಕೊಡಲು||
ತಳರ್ದನಲ್ಲಿಂ ಮೇಲೆ ಮುನಿಪದ|
ನಳಿನಕಾನತನಾಗಿ ಸೇವಾ|
ಜಲನಿಧಿಯ ನಿರ್ಘೋಷ
ನಿಲುಕಲಜಾಂಡಮಂಡಲವ||
ಚಿತ್ರ, ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಆಗಲದಕೇನೀತ ವೈರೋ|
ದ್ಯೋಗಗತಿಗೊಡರಿಸಿದನಾದೊಡೆ|
ಕಾಗೆ ಹದ್ದಿಗೆ ಹರಹುವೆನು ಕಡಿದೀ ಚತುರ್ಬಲವ||
ಮೇಗೆಬರಲಪಕೀರ್ತಿಯದಕೇ|
ನೀಗಲೆಣಿಕೆಯೆನುತ್ತ ಕರುಣಾ|
ಸಾಗರನ ಬಳಿಗೈದಿ ಬಿನ್ನಹ ಮಾಡಿದನು ಹದನ||
ಚಿತ್ರ ಶಂಕರ್ ಚಂದಮಾಮ



ಈಕ್ಷಿಸುವನ್ನೆಗಂ ಭುವನವಲ್ಲಭ ನಿಮ್ಮ
ಪದಾರವಿಂದಮಂ|
ರಕ್ಷಿಸುವೆಂ ಧರಾವಲಯಮಂ ಭವದಾಜ್ಞೆಗೆ
ಬೆರ್ಚಿ ಮನ್ಮನ|
ಸ್ಸಾಕ್ಷಿಕಾವಾನಪೇಕ್ಷಿಸುವೆನಲ್ತುಪಭೋಗಮನೆಂ
ದು ಪೂಣ್ದನೇ|
ನಕ್ಷತ ಧೈರ್ಯನೋ ಭರತನೊಲ್ವನೆ ಲೋಭರತ
ಪ್ರಪಂಚಮಂ||
ಚಿತ್ರ ಶಂಕರ್ ಚಂದಮಾಮ



ಅಳಲಿದರು ಬಳಿಕೊಬ್ಬರೊಬ್ಬರು|
ಹಳವಿಸುತ ಹಲವಂಗದಲಿ ನೃಪ|
ಕುಲಲಲಾಮಗೆ ವೀರದಶರಥ
ಸಾರ್ವಭೌಮಂಗೆ||

ಚಿತ್ರ ಶಂಕರ್ ಚಂದಮಾಮ



ತಿಳುಹಿ ಬಳಿಕನಿಬರನು ಸಲಿಲಾಂ|
ಜಲಿ ಮೃತಸ್ನಾನಾದಿ ಕರ್ಮಾ|
ವಳಿಯ ಮಾಡಿಸಿ ಮುನಿನುಪಚರಿಸಿದನು
ರಘುಪತಿಯ||



ತಂದೆಯಡಗಿದ ಬಳಿಕ ನೀನೇ|
ತಂದೆ ತಾಯ್ ನಮಗವನಿತಾಯಲಿ|
ಸಂಧಿಸುವರೇ ಮನವ ಮಕ್ಕಳು ಮರೆಯ
ಮಾತೇನು||
ಇಂದು ನೀನರಸಾಗದಿರೆ ತ|
ಮ್ಮಂದಿರಲಿ ತಾನೊಬ್ಬ ನಿಮಗಿ|
ಲ್ಲೆಂದು ಚಿತ್ತೈಸೆನುತ ಬಿನ್ನಹ ಮಾಡಿದನು ಭರತ||
ಚಿತ್ರ ಶಂಕರ್ ಚಂದಮಾಮ



ಒಡನೆ ಭರತನ ಬಿನ್ನಹಕೆ ಮೈ|
ಗೊಡುವುದೆಂದು ಸುಮಂತ್ರನಂಘ್ರಿಯ|
ಹಿಡಿದನುಚಿತವಿದೆಂದು ಕೈಮುಗಿದನು
ವಸಿಷ್ಠಮುನಿ||
ಬಿಡಿಸಿದನು ಬಳಿಕವರವರ ಮನ|
ದೊಡಕನನುಪಮ ನೀತಿಶಾಸ್ತ್ರದ|
ಸಡಗರದ ಸತ್ಯವ್ರತಾಗಮದನುನಯೋಕ್ತಿಯಲಿ||



ಅಮಳ್ವೆತ್ತಂತೆ ಸಮಾನಮಾಗೆ ಭರತಂ
ಕೊಂಡಾಡಿದಂ ಕ್ಷತ್ರಧ|
ರ್ಮಮುಮಂ ಧರ್ಮಮುಮಂ ಧರಾವಲಮಂ
ವಿಕ್ರಾಂತದಿಂ ತಾಳ್ದಿ ಸಂ|
ಯಮ ಸಂರಕ್ಷಣ ಸತ್ವದಿ ತಳೆದು ದಾನಂ ಪೂಜೆ
ಶಿಲೋಪವಾ|
ಸಮನತ್ಯುನ್ನತರಾದ ರಾಜತನಯರ್
ತನ್ನನ್ನರಾರೆಂಬಿನಂ||

ಚಿತ್ರ ಶಂಕರ್ ಚಂದಮಾಮ



ಜನಕಜಾಸುತ ಕೇಳು ಕೈಕಾ|
ತನುಜ ತೆರಳಿದ ಬಳಿಕ ತಿಂಗಳ|
ದಿನವ ಕಳೆದರು ವಿಪಿನವಿಲಸಿತ ಚಿತ್ರಕೂಟದಲಿ||
ವನಿತೆ ಸಹಿತ ತದೀಯ ಶೈಲದ|
ವನವಿಹಾರೋದ್ಯೋಗಕೇಳೀ|
ಜನಿತಮಾನಸನಾಗಿ ತೊಳಲಿದನಾ ಮಹೀಪಾಲ||
ಚಿತ್ರ ಶಂಕರ್ ಚಂದಮಾಮ



ಅಂದು ಬೀಳ್ಕೊಂಡಖಿಳ ಸೇನಾ|
ವೃಂದಸಹಿತಾ ಭರತನೃಪನೆ|
ಯ್ತಂದು ನಗರವ ಹೊಗದೆ ನಂದಿಗ್ರಾಮದಲಿ
ಬಳಿಕ||
ಇಂದಿರೇಶನ ತೊರವೆಯರಸನ|
ಸಂದ ನಿಜಪದಭಕ್ತಿಪರಮಾ|
ನಂದರಸಮಯನಾಗಿ ಪಾಲಿಸಿದನು
ಧರಾತಳವ||

ಚಿತ್ರ ಶಂಕರ್ ಚಂದಮಾಮ



ಜನಕಜಾಸುತ ಕೇಳು ಕೈಕಾ|
ತನುಜ ತೆರಳಿದ ಬಳಿಕ ತಿಂಗಳ|
ದಿನವ ಕಳಿದರು ವಿಪಿನವಿಲಸಿತ ಚಿತ್ರಕೂಟದಲಿ||
ವನಿತೆ ಸಹಿತ ತದೀಯ ಶೈಲದ|
ವನವಿಹಾರೋದ್ಯೋಗಕೇಳೀ|
ಜನಿತಮಾನಸನಾಗಿ ತೊಳಲಿದನಾ ಮಹೀಪಾಲ||

ಚಿತ್ರ ಶಂಕರ್ ಚಂದಮಾಮ



ಸಾರುತಿರೆ ಪದಸೋಂಕಿಗಾ ಸತಿ|
ಕ್ರೂರ ವಾಯಸಕಂಜಿ ಪತಿಯ ಶ|
ರೀರವನು ಬಿಗಿಯಪ್ಪುತಾಚರಿಸಿದಳು
ಭೀತಯಲಿ||
ವೀರ ಕೇಳ್ ವಾಯಸದ ಪದನಖ|
ಧಾರೆ ಭುಜದಲಿ ಬೀಳೆ ಬಳಿಕಸು|
ರಾರಿ ಕೋಪಿಸುತಿಟ್ಟನಾ ಖಳನನು
ತೃಣಾಸ್ತ್ರದಲಿ||

ಚಿತ್ರ ಶಂಕರ್ ಚಂದಮಾಮ



ಶರವಿದೆಮ್ಮದಮೋಘ ಮರೆಯೊ|
ಕ್ಕರನು ಸಲಹುವ ಬಿರಿದು ಸಂದಿಹು|
ದೆರಡುಗುಣ ನಮಗೀ ಧರಿತ್ರಿಯೊಳೆಂದು
ರಘುನಾಥ||
ಸರಳಿಗೊಂದಕ್ಷಿಯನು ಕೊಂ|
ಡೆರಡು ಕಡೆಗೊಂದಾಲಿಯನು ವಿ|
ಸ್ತರಿಸಿ ಕರುಣದಲಾ ಜಯಂತನ ಕಾಯ್ದನಾ
ರಾಮ||

ಚಿತ್ರ ಶಂಕರ್ ಚಂದಮಾಮ



ಅದು ಬಳಿಕ ಭುಗಿಲಿಡುತ ಬೆಂಬ|
ತ್ತಿದುದು ಬಿಡದಾ ಕಾಕನನು ಸಾ|
ರಿದುದು ಸರಸಿಜಭವನನಾತನಿನಾಗದಿರೆ
ಮುರಿದು||
ಮದನಮದಮರ್ದನನ ಮರೆಯೊ|
ಕ್ಕುದು ಬಳಿಕ್ಕಾ ದೇವನಲಿ ಹರಿಯ|
ದುದ ಕಂಡಿಳಿತಂದ ಸಾರ್ದುದು ಪಾಕಶಾಸನನ||
ಚಿತ್ರ ಶಂಕರ್ ಚಂದಮಾಮ



ಕೇಳು ಕುಶ ಬಳಿಕಿವರು ಹಲವು ವ|
ನಾಳಿಗಳ ಕಳಿದತ್ರಿಮುನಿಕುಲ|
ಮೌಳಿಮಣಿಯಾಶ್ರಮವ ಸಾರಿದರತುಳ
ಹರುಷದಲಿ||
ಶ್ರೀಲತಾಂಗಿಯ ರಮಣನೀ ಭೂ|
ಪಾಲನೆಂದರಿದಾ ಮುನಿಪ ಸಂ|
ಸ್ಥೂಲಸತ್ಕೃತಿಯಿಂದ ಸಂಭಾವಿಸಿದನವರುಗಳ||
ಚಿತ್ರ ಶಂಕರ್ ಚಂದಮಾಮ



ಹೇಳಿದಳು ಬಳಿಕವನಿಜೆಗೆ ಶಶಿ|
ಮೌಳಿ ವಿಷ್ಣುವಿರಿಂಚಿಗಳು ನಿಜ|
ಬಾಲಕರು ತನಗಾದ ಕಥೆಯನು ತನ್ನ
ನಡವಳಿಯ||
ಶೀಲವದು ಸಿಗುರೇಳದಿರಲಿ ವಿ|
ಶಾಲಪತಿ
ಭಜನೆಯಲಿಯೆಂದತಿ|.ಲಾಲನೆಯಲುಪಚರಿಸಿದ
ಳು  ಲಲನಾಶಿರೋಮಣಿಯ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಮುನಿ ಬಳಿಕ ಬೀಳ್ಕೊಟ್ಟನೀ ರಘು|
ಜನಪರನು ಜಮದಗ್ನಿರಾಮನ|
ಬನಕೆ ಬಂದರು ಬೀಳುಕೊಂಡರು
ತನ್ಮುನೀಶ್ವರನ||
ಮುನಿಮುನಿಗಳಾಶ್ರಮವ ಹೊಕ್ಕವ|
ರೆನಿತು ಮಾಡಿದ ಸತ್ಕೃತಿಯ ಸಾ|
ಧನವ ಕೈಕೊಳುತ್ತೈದಿದರು ಘನಘೋರ
ಕಾನನವ||
ಚಿತ್ರ ಶಂಕರ್ ಚಂದಮಾಮ



ಏನಿದಚ್ಚರಿ ವಿಪಿನವಿದರಲಿ|
ಮಾನವರ ಸಂಚಾರವಿಲ್ಲ ನ|
ವೀನವಿದು ನರರಾಗೆ ಪುಣ್ಯವಿದ್ದೈಸಲೇಯೆನುತ||
ಆ ನಿಶಾಟ ವಿರಾಧನಾ ಮಾ|
ಯಾನ್ನೃ ಬಳಿಗೈದಿದನು ಸೀ|
ತಾನಿತಂಬಿನಿ ಬೆದರಿ ಬಹಳಿತ ರೌದ್ರರೂಪಿನಲಿ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಸೀತೆಯನು ಕಂಡಾ ವಿರಾಧನು|
ಸೋತನೈ ಚಿತ್ತದಲಿ ಲೆಕ್ಕಿಸ|
ದೀತಗಲ ಝುಂಕಿಸುತ ಝೊಂಪಿಸಿದನು
ವಿದೇಹಜೆಯ



ವರಪಲಾಶಾಶ್ವತ್ಥವೌದುಂ|.ಬರ ಕುಶ ಶ್ವೇತಾರ್ಕ
ಶಮಿ ಖಾ|
ದಿರವಪಾಮಾರ್ಗಾದಿ ಹೋಮದ ಸಮಿಧೆಗಳ
ಹೊರೆಯ||
ಭರಿತ ಘಟ ಗೋಕ್ಷೀರ ದಧಿ ಬಂ|.ಧುರದ ಮಧು
ಸಿತಸರ್ಪಿಗಳ ಮುನಿ|
ವರನ ಬಳಿವಿಡಿದೈದಿದರು ಶರಭಂಗನಾಶ್ರಮದ||

ಚಿತ್ರ, ಶಂಕರ್ ಚಂದಮಾಮ



ಕಳಿದರಿವರು ವಿರಾಧವಿಪಿನ|
ಸ್ಥಳವನಲ್ಲಿಂ ಮೇಲೆ ನಾನಾ|
ಹಳುವವನು ಬಳಸಿದರು ಬಂದರು
ತೆಂಕಮುಖವಾಗಿ||
ಫಲಿತ ಭೂಜಾರಣ್ಯವನು ಮಂ|
ಜುಳಮಹೀಲಾವಣ್ಯವನು ಕಂಡೊಲಿದು
ಹೊಕ್ಕರು ದಂಡಕಾರಣ್ಯವನು ಹರ್ಷದಲಿ||
ಚಿತ್ರ ಶಂಕರ್ ಚಂದಮಾಮ



ಆ ಸುತೀಕ್ಷಣನಾಶ್ರಮದೊಳಾ|
ದಾಶರಥಿ ನೂಕಿದನು ತಿಂಗಳ|
ವಾಸರವನಲ್ಲಿಂದ ಮೇಲಾ ಮುನಿಯ
ಬೀಳ್ಕೊಂಡು||
ಆ ಸುಮಿತ್ರಾಸೂನು ಜನಕಮ|.ಹೀಶನಂದನೆ
ಸಹಿತಗಸ್ತ್ಯಮು|
ನೀಶನೊಡವುಟ್ಟಿದನ ಬಳಿಗೈತಂದರೊಲವಿನಲಿ||
ಚಿತ್ರ ಶಂಕರ್ ಚಂದಮಾಮ



ಇವರನಾ ಮುನಿಯುಪಚರಿಸಿದನು|
ವಿವಿಧ ಸತ್ಕಾರದಲಿ ತಿಂಗಳ|
ದಿವಸ ಪರಿಯಂತಿರಿಸಿ ಬಳಿಕಿಲ್ವಲನ ಸಂಗತಿಯ||
ಅವನನುಜ ವಾತಾಪಿಯೆಂದೆಂ|
ಬವನ ಕಥೆಯನು ಪೇಳ್ದು ಘಟಸಂ|
ಭವನ ಭವನಕೆ ಬೀಳುಕೊಟ್ಟನು ಮುನಿ
ಕಕುತ್ಥ್ಸಜನ||
ಚಿತ್ರ ಶಂಕರ್ ಚಂದಮಾಮ



ಆ ಮಹಾಶ್ರಮವೆಸೆದುದಿದಿರಲಿ|
ಹೋಮಧೂಮೋದ್ಧೂತಗಂಧ|
ಸ್ತೋಮದಲಿ ಸ್ವಾಹಾಸ್ವಧಾಕಾರಪ್ರಣಾದದಲಿ||
ಸಾಮಗಾನಧ್ವಾನದಲಿ ವಿ|.ಶ್ರಾಮವಿಶ್ರುತ
ರಮ್ಯಪೂರ್ಣಸು|
ಧಾಮದಲಿ ಕಂಡಿವರು
ಹೊಕ್ಕರಗಸ್ತ್ಯಮಂದಿರವ||
ಚಿತ್ರ ಶಂಕರ್ ಚಂದಮಾಮ



ಶಕ್ರವಚನನದಲೀತನಂದಿನ|
ಚಕ್ರಧರನೆಂದರಿದು ರಘುಕುಲ|
ಚಕ್ರವರ್ತಿಯನುಪಚರಿಸಿದನು ಸಾನುರಾಗದಲಿ||
ಶಕ್ರನಿತ್ತಾಯುಧವನಾವಂ|
ಶ ಕ್ರಮಾಚಾರ್ಯಂಗೆ ರಾಕ್ಷಸ|
ವಿಕ್ರಮಾಂಬುಧಿವಡಬಗಿತ್ತನಗಸ್ತ್ಯಮುನಿ ಬಳಿಕ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಇರಿಸಿಕೊಂಡಿದ್ದನು ನಿಶಾಚರ|
ಕರಿಮೃಗೇಂದ್ರನನೊಂದು ತಿಂಗಳು|
ಪರಮಪಂಚವಟಿ ಪ್ರದೇಶದ ಘನವನಾಂತರಕೆ||
ಹರಸಿ ಕಳುಹಿದನನಿವರು ಮೂವರು|.ಬರುತ
ಕಂಡರು ದಂಡಕಾನನ|
ದಿರವನಾ ವಿಸ್ತರವ ತೋರಿದನಾ ನೃಪತಿ ಸತಿಗೆ||
ಚಿತ್ರ ಶಂಕರ್ ಚಂದಮಾಮ



ಲತೆವನೆಯೊಳಗಣ ತಣ್ಪುಳಿ|
ಲ ತಾಣದೊಳ್ ಕುಸುಮದೆಸಳ ಪಸೆಯಂ
ಸೀತಾ|
ಪತಿಗೆ ಸಮೆದಂ ಸುಮಿತ್ರಾ|
ಸುತಂ ಸಹೋದರರೊಳಿಂತತಿಸ್ನೇಹಿತರಾರ್||
ಪಂಪರಾಮಾಯಣ,ಚಿತ್ರ ಶಂಕರ್ ಚಂದಮಾಮ



ನೀರೇ ಗೋತ್ರೇಂದ್ರಮಂ ನೀಂ ಮರೆವುದೆ
ಬಗೆಯೌ! ಪರ್ಣದಾವಾಸದಲ್ಲಾ|
ಮೋರಂತೊರ್ತೋಳ್ಗಳಿಂದ ಬಲದೆ
ಪಿಡಿಯುತಾಲಿಂಗಿಸುತ್ತಿರ್ವರುಂ ಪ|
ಟ್ಟೋರೊಂದಂ ಮೆಲ್ಲಮೆಲ್ಲಂ
ರಹದಿರವುಮನಾಡುತ್ತೆ ಬಲ್ಲಂದದಿಂದಂ|
ಸೇರಿರ್ದಂದಾ ತ್ರಿಯಾಮಂ ಜುಗುಳ್ದ ಬಗೆಯನೇ
ಭಾವಿಸಲ್ಕಾರ್ತೆವೇ ಪೇಳ್||

ಉತ್ತರ ರಾಮಚರಿತೆ,ಚಿತ್ರ ಶಂಕರ್ ಚಂದಮಾಮ



ನೋಡು ಬೇರಿವನಿತ್ತಲಿವೆ ಹರಿ|
ಕ್ರೋಢ ಖಡ್ಗಿ ಕುರಂಗಿ ಚಿತ್ರಕ|
ನೇಡ ಕಡವಮ್ಮಾವು ಸೈರಿಭ ಶರಭ ಸಾರಂಗ||
ಕಾಡುಬೆಕ್ಕುರಿಗಣ್ಣ ಜಂಬುಕ|
ಕೋಡಗವು ವೃಕ ಶಶಕ ಮರೆ ಮರ|
ಗಾಡಿನೊಳಗಿವೆ ನೋಡು ಸೀತೆ ಸಮಗ್ರ
ಮೃಗಕುಲವ||



ಸೌಮಿತ್ರಿಯ ನಿರತಿಶಯ|
ಪ್ರೇಮಮನದನಿಂತುಟಂತುಟೆಂಬಂತುಟೆ ನಿ||
ದ್ರಾಮುದ್ರಿತ ಲೋಚನನಿರೆ|
ರಾಮಂ ರಕ್ಷಾನಿಮಿತ್ತಮೆಳ್ಚತ್ತಿರ್ದಂ||

ಚಿತ್ರ ಶಂಕರ್ ಚಂದಮಾಮ



ಆದಡೆಲೆ ವಿಹಗೇಂದ್ರ ರವಿವಂ|
ಶೋದಯನ ವಸುಮತಿಯ ಸುಮನೋ|
ಪಾದಪನ ದಶರಥನ ಬಲ್ಲೈ ಕೇಳಿ ಪೂರ್ವದಲಿ||
ತೀದನಾತನು ಬಳಿಕ ಭರತಂ|
ಗಾದುದೀ ಧರೆ ವನಪರಿಭ್ರಮ|
ಣೋದಯವು ನಮಗಾಯ್ತು ಪಿತನಾಜ್ಞೆಯಲಿ ಕೇಳೆಂದ||
ಚಿತ್ರ ಶಂಕರ್ ಚಂದಮಾಮ

ಬಂದನಿಂದ್ರಸಹಾಯಕಜನೃಪ|
ನಂದನನು ಬಳಿಕಾ ಮಹೀಶನೊ|
ಳೊಂದುಗೂಡಿ
ಬಿಡೌಜನಾಜಿಯಲರಿನಿಶಾಚರರ||
ಕೊಂದೆವಾವದರಿಂದ ಬಳಿಯಲಿ|
ಬಂದುದ್ಯೆ ಬಂಧುತ್ವ ಕೇಳ್ಯೆ|
ವೊಂದುದರದಲಿ ಬರಲು ಬೇಕೇ ರಾಮ
ಕೇಳೆಂದ||

ಚಿತ್ರ ಶಂಕರ್ ಚಂದಮಾಮ


ಮೆರೆದುದಿದಿರಲಿ ನಿಖಿಳ ನದಿಗಳ|
ಮುರುಕವನು ಮಸುಳಿಸುವ ಮಸಕದ|
ನಿರಿಸಿನಲಿ ನೀರುಬ್ಬುಗಳ ನಿರ್ಘೋಷದಬ್ಬರದ||
ಬಿರುಬು ತೆರೆಗಳ ಸಿಡಿದೊಗುವ ತುಂ|
ತುರಿನ ತೂಳುವ ಫೇನಪಿಂಡದ|
ಗುರುಬಿನಲಿ ಗಾಡಿಸಿತು ಗೋದಾವರಿ
ಕಕುಸ್ಥಜನ||
ಚಿತ್ರ ಶಂಕರ್ ಚಂದಮಾಮ



ಕೇಳಿದ್ದೈ ಕುಶ ನಿಮ್ಮ ರಘುಭೂ|
ಪಾಲನಿದ್ದನು ಗುರುತನುಜನ ವಿ|
ಶಾಲವಚನದಲಮಳ ಪಂಚವಟಿಪ್ರದೇಶದಲಿ||
ಕಾಲಸವೆದುದು ಹಿಂದಕಬುದದ|
ಮೇಲೆ ತಿಂಗಳು ನಾಲ್ಕರೆಣಿಕೆಯ|
ಮೇಲೆ ಬಂದುದು ಕೇಳಿದ್ದೈ
ಹಿಮಸಮಯಸೌರಂಭ||
ಚಿತ್ರ ಶಂಕರ್ ಚಂದಮಾಮ



ಭುವನ ಮೂರರಲಧಿಕರೆಂದೆಂ|
ಬವರು ನಾಲ್ವರು ರೂಪಿನಲಿ
ವೈ|.ಶ್ರವಣಸುತನಮರೇಂದ್ರನಂದನರಿಂದು
ಮನ್ಮಥರು||
ಅವರುಗಳ ಶತಕೋಟಿಲಾವ|
ಣ್ವವನು ಮಿಕ್ಕಿದೆ ನೋಡಲೀ ನೃಪ|
ನವಯವವದೊಳಿನ್ನಾವನೋಯೆಂದೊಲೆದಳವ
ಯವವ||


ನಗುತ ಲಕ್ಷ್ಮಣದೇವನಾಕೆಯ|
ಹೆಗಲ ಹದರಿನಲೌಕಿ ನಿನ್ನಯ|
ಸೊಗಸಿಗನುಗುಣವಾದವರ ವರಿಸೆಂದು
ಹೊರವಡಿಸೆ||
ಒಗುವ ಕಿವಿ ಮೂಗುಗಳ ರಕುತದ|
ಹಗರಣದ ಹೊಸನಾಟಕದ ಹಲು|
ದೆಗೆದ ರಕ್ಕಸಿ ಬಂದಳೊದರುತ ಖರನ ಪಟ್ಟಣಕೆ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ಬಿಸುಟಳೊದರುತ ಶೂರ್ಪಣಖಿ ನಿವ|
ಡಿಸಿದ ಕಟ್ಟಭಿಮಾನವಿಲಸಿತ|
ಬೆಸುಗೆಗಳಚಿದ ನಾಸಿಕವನಿದಿರಲಿ ಖರಾಸುರನ||
ಅಸುರನವನಿದ ಕಾಣುತೀ ಜಗ|
ದಸುವಿನಳುವಿನ ಕಾಲರುದ್ರನ|
ವಿಷಮಕೋಪಜ್ವಾಲೆಗಿಮ್ಮಿಗಿಲೆನಲು
ಖತಿಗೊಂಡ||
ಚಿತ್ರ ಶಂಕರ್ ಚಂದಮಾಮ



ಬೇಗಮಾಡದಿರಿರಿಸು ಸೀತೆಯ|
ನೀ ಗಿರಿಯ ಶಿಖರದಲಿ ಕೈಮಿಗಿ|
ಲಾಗಿ ಬಂದರಿಭಟರ ಭಂಜಿಸು ನೇಮ ನಿನಗಿತು||
ಭಾಗೆ ನಮಗೀ ರಕ್ಕಸರ ರಣ|
ದಾಗು ತಾ ಕಾರ್ಮುಕವನೆಂದು ಸ|
ರಾಗದಲಿ ಸಾಹಸ ಪರಾಕ್ರಮಿ ಸಮರಕನುವಾದ||

ಚಿತ್ರ ಶಂಕರ್ ಚಂದಮಾಮ



ಆಸುರದ ಸಂಗ್ರಾಮದಲಿ ಖರ|
ದೂಷಣ ತ್ರಿಶಿರಾದಿಗಳ ಕೀ|
ನಾಶನಗರಿಗೆ ಕಳುಹಿದನು ಕಡುಗಲಿ
ರಘುಪ್ರಭವ||

ಚಿತ್ರ ಶಂಕರ್ ಚಂದಮಾಮ



ರಣಕೆ ನಮಿಸಿ ಸಮಸ್ತ ಶಾಕಿನಿ|
ಗಣಕೆ ಬೆಸಸಿ ಮಹೋಗ್ರಚಾಪದ|
ಗುಣವ ಸಡಿಲಿಸಿ ಬಸಿವ ಮೈವಸೆಗಳನು
ಬಳಿದಿಕ್ಕಿ||
ಪ್ರಣುತ ಸುರಮುನಿಜನದ ಜಯಜಯ|
ರಣಿತರವದುಬ್ಬಿನಲಿ ರಕ್ಕಸ|
ರಣಭಯಂಕರನೈದಿದನು
ನಿಜಪರ್ಣಮಂದಿರವ||
ಚಿತ್ರ ಶಂಕರ್ ಚಂದಮಾಮ



ನಿನಗೆ ಕಾಣಿಕೆಯಾಗಿ ತಹೆನಾ|
ವನಿತೆಯನು ತಾನೆಂಬ ಮತಿ ಸಂ|
ಜನಿಸಿ ಕೈಯಿಕ್ಕಿದೆನು ಕಪಟದಲಾ ನಿತಂಬಿನಿಯ||
ಜನಪನನುಜನು ಬಂದು ಕಿವಿಮೂ|
ಗಿನಲಿ ಕಂಡನು ಹರಿವನೆನ್ನಲಿ|
ಹನನ ಬಳಿಕಾಯ್ತುದರಿನೀ ಖರ
ದೂಷಣಾದಿಗಳ||
ಚಿತ್ರ ಶಂಕರ್ ಚಂದಮಾಮ


ಬಂದು ವಿದ್ಯುಜ್ಜಿಹ್ವ ಬಳಿಕಾ|
ಸ್ಯಂದನದ ಘೋಟಕಸಹಸ್ರದ|
ಕಂದವನು ಬೋಳೈಸಿ ಪಕ್ಕದ ಪಾರಿವಳ್ಳೈಗಳ||
ಮುಂದುವರಿಸಿದನಭ್ರದಲಿ ಹರಿ|
ತಂದುದಾ ರಥ ಕಳಿದು ಕಾನನ|
ವೃಂದವನು ಮಾಯಾವಿ ಮಾರೀಚನ
ನಿಜಾಶ್ರಮಕೆ||

ಚಿತ್ರ ಶಂಕರ್ ಚಂದಮಾಮ



ಉಗಿದ ಖಡ್ಗವನೊರೆಯ ಬಸುರಲಿ|
ಹೊಗೊಸಿದನು ದಶವದನ ವದನದ|
ನಗೆಯಲೆಂದನು ಮಾವ ಕೇಳೆನ್ನಯ
ದುರುಕ್ತಿಗಳ||
ಬಗೆಯದಿರಿ ನೀವೆಂದು ಕೈಗಳ|
ಮುಗಿದು ನಯದಲಿ ಬೇಡಿಕೊಂಡನು|
ಚಿಗಿದುದಂಬರಕಾಗಿ ರಥ ಸಾರಥಿಯ
ಸನ್ನೆಯಲಿ||.ಚಿತ್ರ ಶಂಕರ್ ಚಂದಮಾಮ



ಅಂದು ನಾನಿರಲಳಿವರೇ ನೀ|
ನೆಂದ ವೀರರರು ಸಾಕದಾ ಮಾ|
ತಿಂದು ನೀ ಬಹುದುಂಟೊ ಬಾರೆಯೊ ಹೇಳು
ಬೇಗದಲಿ||
ಬಂದಳುಹುವೆ ಬಾರದಿರ್ದಡೆ|.ಕೊಂದು
ಬಿಸುಡುವೆ ನಿನ್ನನೀಗೆನು|
ತಿಂದುಹಾಸವನುಗಿದು ನೆಗಹಿದನಧಿಕ
ರೋಷದಲಿ||
ಚಿತ್ರ ಶಂಕರ್ ಚಂದಮಾಮ



ಇಳಿದುದೋ ಚಂದ್ರಮನ ಸಾಂದ್ರೋ|ಜ್ವಲ
ಸುಚಂದ್ರಿಕೆಯನು ನಭೋಮಂ|
ಡಲದೊಳಗೆ ಕದ್ದಮಮ
ಪೂರ್ಣಸುಧಾಂಶುಮೃಗವೆನಲು||
ಸುಳದುದಾ ಮೃಗಪೋತ ಪರಿಮಳ|
ಮಿಳಿತ ತೇಜೋಲತೆಯ ತರಿತರಿ|
ದಿಳುಹುತವನೀನಂದನೆಯ ಪೂಗೊಳದ
ಹೊರೆಗಾಗಿ||ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ




ಮುಗ್ಧಾಭಾವಭಾರದಲಿ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಹಾ ಸುಮಿತ್ರಾಸೂನು ಹಾ ಸೀ|
ತಾಸರೋರುಹನಯನೆ ಹಾ ಎಂ|
ಬೀ ಸಗಾಢಧ್ವನಿಯಲಿಳೆಗೊರಗಿದನು
ಮಾರೀಚ||
ಆ ಸುರಾರಿಗೆ ಸನ್ನೆಯಂ ಬಳಿ|
ಕೀ ಸರೋಜಾಂಬಕನ ರಾಣೀ|
ವಾಸ ಕೇಳಿದು ಹಾಯೆನುತ ಹಮ್ಮೈಸಿದಳು
ಧರೆಗೆ||

ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕಾದುಕೊಂಡಿರಿ ಸತಿಯನೆಂದಭಿ|
ವಾದನಂಗೈದನು ಮಹೀಜಲ|
ವಾದಿ ಭೂತಂಗಳಿಗೆ ದಿಕ್ಕಿನ ದೇವಸಂತತಿಗೆ||
ಮೇದಿನೀಶ ಬಹನ್ನಬರ ನಿಮ|
ಗೈದುವುದು ಭರಭಾರವೆಂದತಿ|
ಖೇದದಲಿ ಕಾಲಿಕ್ಕಿದನು ಕಾನನಕೆ ಸಂಜೆಯಲಿ||

ಚಿತ್ರ, ಶಂಕರ್ ಚಂದಮಾಮ



ಅಡಗಿತಾಕ್ಷಣ ದಂಡ ಮೆಲ್ಲನೆ|
ಸಡಿಲಿಹೋಯಿತು ಕರ ಕಮಂಡಲ|
ಮಿಡುಕು ನಿಂದುದು ಬೆರಳ ನಾಮಸ್ಮರಣೆಗಳು
ಹರನ||
ಸಿಡಿದು ಹಾರಿತು ಜರೆಯ ಜಾಡ್ಯದ|
ತೊಡಹದರ್ಧವಯೋವಿಲಾಸದ|
ಜಡೆಯ ತಾಪಸಿಯಾಗೆ ಮನದಲಿ ಹೆದರಿದಳು
ಸೀತೆ||
ಚಿತ್ರ ಶಂಕರ್ ಚಂದಮಾಮ



ಶಿರದಮುಂಡನದಕ್ಷಮಾಲೆಯ|
ಕರದ ದಂಡ ಕಮಂಡಲದ ಬಂ|
ಧುರದ ಕಾಷಾಂಬರದ ಕೌಪೀನದ ಕಳೇವರದ||
ಜರೆಯಜರುಗಿದ ಬೆನ್ನಿನಲುಗುವ|
ಶಿರದ ಶೂಲಿಯ ಸಟೆಯ ನಾಮ|
ಸ್ಮರಣೆಯಲಿ ಮೈದೋರಿದನು
ಮಾಯಾಮಹೀಸುತೆಗೆ||
ಚಿತ್ರ ಶಂಕರ್ ಚಂದಮಾಮ



ಏಳುತವನಾ ಭಿಕ್ಷುವೇಷವ|
ಬೀಳುಕೊಟ್ಟನು ತೋರಿದನು ದಶ|
ಮೌಳಿಗಳ ಮದದುಬ್ಬುಗೊಬ್ಬಿನ
ಬಾಹುದಂಡಗಳ||
ನೀಲಮೇಘನಿಭಾಂಗದುರು ದಂ|
ಷ್ಟ್ರಾಳಿಗಳ ಮಣಿಕಾಂಚನದ ಮಕು|
ಟಾಳಿಗಳ ವಿವಿದಾಭರಣದಭಿನವದ ರೂಪಕವ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ದೋಷಿ ಪಿಡಿವಂತೆ ದಿವ್ಯದ|
ಕಾಸಿದ ಕುಳುವಂ ಕಡಂಗಿ ಕಾಳೋರಗನಂ||
ಕೂಸು ಪಿಡಿವಂತೆ ಪಿಡಿದಂ|
ಸಾಸಿಗನವಿವೇಕಿ ದಶಕಂಠಂ||

ಚಿತ್ರ ಶಂಕರ್ ಚಂದಮಾಮ



ಕೇಳಿಸಿದುದಾ ನುಡಿ ವಿಹಂಗಮ|
ಭಾಲನೇತ್ರನ ವೈರಿಸಮರಾ|
ಭೀಳ ಚಂಚುಪುಟಪ್ರಹಾರನ
ಪದನಖಾಯುಧನ||
ಕಾಲಶತವಿಕ್ರಮನ ರಘುನೃಪ|
ಲೋಲುಪನ ರವಿಸೂತಜನ ಬಿಡ|
ದಾಲಿಸಿದನಾನನದ ನೆಗಹಿನಲಾ
ಮಹಾಧ್ವನಿಯ||
ಚಿತ್ರ ಶಂಕರ್ ಚಂದಮಾಮ



ಪತಿ ಕಾಪುವೇಳ್ದು ಪೋದಂ|

ಸತಿಯಂ ಕಳ್ದುಯ್ದಪಂ ಖಳಂ ಮಾರ್ಕೊಂಡು||

ದ್ಧತನಂ ಮದೀಯ ತುಂಡಾ|

ಹತಿಯಿಂ ಶತಖಂಡಮಾಗೆ ಮಾಳ್ಪೆನೆನುತ್ತುಂ||

ಚಿತ್ರ ಶಂಕರ್ ಚಂದಮಾಮ


ಖರನಖರಂಗಳಿಂ
ನಿಶಿತಚಂಚುಗಳಿಂದಿರಿಯಲ್ಕರುತ್ತು ಸಾ|
ರ್ತರೆ ನಸುನಕ್ಕು ಪೊಯ್ಯೆ ಕರದಿಂ
ಗಮನೋತ್ಸುಕನಿಂದ್ರವೈರಿ ತ|
ನ್ನೆರಡುಮೆರಂಕೆಗಳ್ ಮುರಿದಿಳಾತಳದೊಳ್
ಕೆಡೆದತ್ತು ವಜ್ರದಿಂ|
ಸುರಪತಿ ಪೊಯ್ಯೆ ಬೆಟ್ಟು ಕೆಡೆದಂತೆ ಜಟಾಯು
ನಭೋಭಾಗದಿಂ||.ಚಿತ್ರ-ಶಂಕರ್ ಚಂದಮಾಮ


ತುರುಗಿದಂಬಿನಲೆಯ್ಯಮೃಗ ಮೈ|
ಯುರುಬೆಯಲಿ ಮುಳುಗೆದರುವಂದದ|
ಲುರುಬಿ ಝಾಡಿಸಿ ಝಡಿತೆಯಲಿ ಮೇಲ್ವಾಯ್ದು
ರಿಪುಶಿರವ||
ತರಿದು ತುಂಡದಲಭ್ರಮಂಡಲ|
ಕುರುಬಿ ಮುಂಡದಲೇಳ್ವ ತಲೆಗಳ|
ತರಿದು ತಿರಿಕಲ್ಲಾಡುತಿರ್ದನು ವೀರವಿಹಗೇಂದ್ರ||
ಚಿತ್ರ ಎಂಟಿವಿ ಆಚಾರ್ಯ ಚಂದಮಾಮ


ಖರನಖರಂಗಳಿಂ ನಿಶಿತಚಂಚುಗಳಿಂದಿರಿಯಲ್
ಕರುತ್ತು ಸಾ|
ರ್ತರೆ ನಸುನಕ್ಕು ಪೊಯ್ಯೆ ಕರದಿಂ
ಗಮನೋತ್ಸುಕನಿಂದ್ರವೈರಿ ತ|
ನ್ನೆರಡುಮೆರಂಕೆಗಳ್ ಮುರಿದಿಳಾತಳದೊಳ್
ಕೆಡೆದತ್ತು ವಜ್ರದಿಂ|
ಸುರಪತಿ ಪೊಯ್ಯೆ ಬೆಟ್ಟು
ಕೆಡೆದಂತೆ ಜಟಾಯು ನಭೋವಿಭಾಗದಿಂ||



ಹಾರ ಕಂಕಣ ಕರವಳಯ ಕೇ|
ಯೂರ ಕಾಂಚೀಧಾಮ ನೂಪುರ|
ವೀರಮುದ್ರಿಕೆ ಮುಖ್ಯ ಮಣಿಭೂಷಣವ
ಮೇಲುದಿನ||
ಸೀರೆಯಗ್ರವ ಸೀಳ್ದು ಕಟ್ಟಿ ಕ|
ಠೋರಬಲ ರಘುನಾಥ ಬರಲಿವ|
ಸೇರಿಸುವುದೆಂದಿಟ್ಟಳಾ ಕಪಿನಿವಹವಿದ್ದೆಡೆಗೆ||
ಚಿತ್ರ ಶಂಕರ್ ಚಂದಮಾಮ


ಅಸುರನವನಾಸುರವಿಕರ್ಮದ|
ಸಸಿನವನೆ ಬಲುವಿಡಿದು ಸತಿ ಕೈ|
ವಶಕೆ ಸಿಕ್ಕಿದಳೆಂಬ ಸಂತೋಷದ ಸಘಾಢದಲಿ||
ಒಸಗೆ ಮಿಗಲೈತಂದು ಹೊಕ್ಕನು|
ವಸತಿಯನು ವಸುಮತಿಯಸುತೆ ರಾ|
ಕ್ಷಸರವಂಶಕೆ
ಮೃತ್ಯುವೆಂಬುದನರಿಯದಸುರೇಂದ್ರ||
ಚಿತ್ರ ಶಂಕರ್ ಚಂದಮಾಮ


ಶಾಪ ತನಗುಂಟಾಗಿ ಮನ್ಮಥ|
ತಾಪಕಂಗವನಿತ್ತು ಬಳಿಕವ|
ನಾ ಪತಿವ್ರತೆಯನು
ನಿಶಾಚರಗುರುವಚನದಿಂದ||
ತಾಪವನು ಹಿಂದಿಸುವಶೋಕೆಯ|.ತೋಪಿನಲಿ
ಸರಮೆ ತ್ರಿಜಟೆಯರ|
ಕಾಪಿನಿಂದಿರಿಸಿದನು
ತೊರವೆಯರಾಯನಂಗನೆಯ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ಹೇಳುಹೇಳೇನಾಯ್ತು ಜನಕನೃ|
ಪಾಲಜೆಯ ಹದನೇನು ಹವಣಿನ|
ಕೀಲಣಿಕೆ ತಾನೇನು ನುಡಿ ನೀನಂಜಬೇಡೆಂದ||
ಹೇಳಿದನು ದೇವಿಯರು ಕೆರಳ್ದ ಕ|
ರಾಳ ವಚನವನದರಿನೆನ್ನನು|
ಬೀಳುಕೊಡೆ ಬರವಾಯ್ತೆನುತ
ಬೀಳಿಸಿದನಶ್ರುಗಳ||
ಚಿತ್ರ ಶಂಕರ್ ಚಂದಮಾಮ



ಒಂದೆರಡು ನಾಲ್ಕೆಂಟರೆಣಿಕೆಗ|
ಳೊಂದಿನಾ ಸ್ಮರತಾಪದ ಭ್ರಮೆ|
ಯಿಂದ ಬೆದರಿದು ಕಂದೆರೆದು ಕಾಮಿನಿಯ
ಕರೆಕರೆದು||
ತಂದೆನಿದಕೋ ಹೊಮ್ಮರಿಯನಿದೆ|
ಯೆಂದು ಬಿಲ್ಲನು ಬಿಸುಟು ಬಾಗಿಲ|
ಮುಂದೆ ಕರೆಕರೆದಂಗಲಾಚಿದನಾ ಮಹೀಪಾಲ||
ಚಿತ್ರ ಶಂಕರ್ ಚಂದಮಾಮ



ಕಲಹಂಸಾಲಸಯಾನೆಯಂ
ಮೃಗಮದಾಮೋದಾಸ್ಯ ನಿಶ್ವಾಸೆಯಂ|
ತಳಿರೇ ತಾವರೆಯೇ ಮದಾಳಿ ಕುಲಮೇ
ಕರ್ನೈದಿಲೇ ಮತ್ತಕೋ|
ಕಿಲಮೇ ಕಂಡಿರೆ
ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ|
ತಳೆಯಂ ಕೈರವನೇತ್ರೆಯಂ
ಪಿಕರವಪ್ರಖ್ಯಾತೆಯಂ ಸೀತೆಯಂ||
ಚಿತ್ರ ಶಂಕರ್ ಚಂದಮಾಮ


ಅರೆಮುಗಿದ ಲೋಚನದ ಬಳಲುವ|
ಕೊರಳ ಬಿರಿತೆರಕೆಗಳ ನಭಕು|
ಪ್ಪರಿಸಿದಂಘ್ರಿಯ
ನಿಶಿಥಖಡ್ಗನಿಘಾತವೇದನೆಯ||
ನರಳಿಕೆಯ ರಘುರಾಮನಾಮ|
ಸ್ಮರಣೆಯರುಣಕುಮಾರಕನ ಬಳಿ|
ಕರಸ ಕಂಡನು ನೆನೆದುಕೊಂಡನು
ಪೂರ್ವದರುಶನವ||

ಚಿತ್ರ ಶಂಕರ್ ಚಂದಮಾಮ



ಸೋರುವಶ್ರುಗಳಿಂದ ಸೀತಾ|
ಚೋರನಲಿ ತಾ ತಾಗಿ ತೊಲಗಿದ|
ಶೌರಿಯದ ಸಂಗತಿಯ ಹೇಳಿದು
ಮುಗಿದನಕ್ಷಿಗಳ||
ಚಿತ್ರ, ಶಂಕರ್ ಚಂದಮಾಮ



ವೀರರಿವರಿಬ್ಬರ ಸಮೀಪಕೆ|
ಸಾರಿದವು ತೋಳೆರಡು ಕಂಡರು|
ಭೈರವಾಡಂಬರದ ಘೋರ ಕಬಂಧರಕ್ಕಸನ||
ಸೈರಿಸುವರೇ ಬಳಕಿವರು ಕೈ|
ಹಾರದಲಿ ಕಣೆದೊಟ್ಟ ಕೈಕೊಂ|
ಡಾರುತೆಚ್ಚರು  ಕೈಗಳನು ಕಳಚಲು ಕಬಂಧಕನ||
ಚಿತ್ರ ಶಂಕರ್ ಚಂದಮಾಮ



ಧಾರುಣಿಯ ನಂದನೆಯನೊಯ್ದನ|
ನಾರದೆಸೆಯಿಂದರಿಕೆ ನಮಗನು|
ಸಾರಿಯಹುದಾ ಹದನ ಹೇಳೆನಲವನು
ಕೈಮುಗಿದು||
ವೀರ ಕೇಳಾದಡೆ ಸುಪಂಪಾ|
ತೀರದನುಪಮ ಋಷ್ಯಮೂಕದ|
ಸೂರಿಯನಸುತನಿಂದ
ನಿಮ್ಮಿಷ್ಟಾರ್ಥವಹುದೆಂದ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಶಬರಿಯನು ಬೀಳ್ಕೊಂಡು ಶೌರ್ಯ|
ಸ್ತಬಕರಲ್ಲಿಂಮೇಲೆ ಬಂದರು|
ವಿಬುಧರಿಗೆ ದುರ್ಲಭದ
ಪಂಪಾಕ್ಷೇತ್ರಮಂಡಲಕೆ||
ಪ್ರಬಲತರ ಘೂರ್ಣಿತದ ಬಹಲಿತ|
ಸಬುದದುಬ್ಬಿನ ಸುಳಿಗಳಬ್ಬರ|
ದಬುಧಿಭಂಗದ ತುಂಗಭದ್ರೆಯ ಕಂಡರಿದಿರಿನಲಿ||
ಚಿತ್ರ ಶಂಕರ್ ಚಂದಮಾಮ



ಮುಂದೆ ಪಂಪಾಕೊಳನ ತೀರಕೆ|
ತಂದು ತಾಪವ ಬಿಡಿಸಿ ನಯಮುಖ|
ದಿಂದಲೊಯ್ಯನೆ ನಡೆಸಿತಂದನು
ತರಣಿನಂದನನ||
ನಂದನದ ಗಿರಿಗಾಗಿ ಕೆಂದಳಿ|
ರೊಂದಿದೆಳೆನನೆದೋರಿಕೆಯ ಮಾ|
ಕಂದವನು ಸಾರಿದನು
ತೊರವೆಯರಾಯನೊಡಗೂಡಿ||
ಚಿತ್ರ ಶಂಕರ್ ಚಂದಮಾಮ



ಕಂಡನೊಡ್ಡೋಲಗದೊಳಿದ್ದೀ|
ಚಂಡಕರಕುಲಕಮಲವನ|
ಮಾರ್ತಾಂಡರನು ರಿಪುವಿಜಯ
ಮಾಯಾಮನುಜವಿಗ್ರಹರ||
ಖಂಡಪರಶು ಪರಾಕ್ರಮರ ಕೋ|
ದಂಡ ಕಾಂಡ ಕೃಪಾಣ ಸುರಗಿ ಸು|
ಮಂಡನರ ರಾಜಸದ ತೇಜೋವಿಮಲವಿಗ್ರಹರ||

ಚಿತ್ರ ಶಂಕರ್ ಚಂದಮಾಮ


ಏನಿದಚ್ಚರಿ ನಮ್ಮ ರಾಷ್ಟ್ರವ|
ಮಾನುಷಸ್ಥಳವಿಲ್ಲಿಗೆತ್ತಣ|
ಮಾನವರ ಸಂಚಾರ ಸಂಘಟನವು ವಿಚಿತ್ರವಲ||
ದಾನವರೊ ಮೇಣ್ ದಿವಿಜರೋ ಹರಿ|
ಸೂನುವಿನ ಗುಪ್ತಿಗರೊ ಬರವು ನ|ವೀನವಾಗಿದೆ
ಹನುಮ ನೋಡವರುಗಳ ನೀನೆಂದ||

ಚಿತ್ರ ಶಂಕರ್ ಚಂದಮಾಮ



ನೋಡಿಬಾ ಹೋಗಾ ನರೇಂದ್ರರ|
ಗಾಢ ಗಮನಸ್ಥಿತಿಯನರಿ ಮಾ|
ತಾಡು ಮನದಂತರವ ತಿಳಿ ಹಗೆಕೆಳೆಯ
ಕೈಮನದ||
ಮೋಡಿಯನು ನಿರ್ಧರಿಸು ನೀ ಮೊದ|
ಲಾಡದಿರು ಮುನಿವೇಷದಲಿ ಮೈ|
ಗೂಡು ನಡೆಯೆಂದಟ್ಟಿದನು ಸುಗ್ರೀವನಲಜನ||

ಚಿತ್ರ ಶಂಕರ್ ಚಂದಮಾಮ



ಆ ಕಪೀಂದ್ರನ ಬೀಳುಕೊಂಡು ಪಿ|
ನಾಕಧರ ವಿಕ್ರಾಂತನೈಂದ್ರ|
ವ್ಯಾಕರಣಕೋವಿದನು
ಸಕಲಸ್ಮೃತಿಕಲಾವಿದನು||
ಲೋಕಲೋಚನಭೀಕರನು ಜಗ|
ದೇಕವೀರನುದಾರಗುಣ ರ|
ತ್ನಾಕರನು ರಾಘವನ ಕಾಣ್ಬುತ್ಸವದಲೈತಂದ||
ಚಿತ್ರ ಶಂಕರ್ ಚಂದಮಾಮ



ವಿತತ ವಿಮಳಾಮ್ನಾಯ ಯಮ ವಿ|
ಶ್ರುತದ ಮಣಿಕುಂಡಲದ ವಿವಿಧ|
ಸ್ಮೃತಿ ವಿಲಾಸಬ್ರಹ್ಮದಂಡದ
ನಿರ್ಜಿತೇಂದ್ರಿಯದ||
ನುತಕನಕ ಕೌಪೀನದಾಗಮ|
ದತಿಶಯದ ಯಜ್ಞೋಪವೀತದ|
ಯತಿಕುಲೋತ್ತಮನೈದಿದನು
ನರರೂಪಿನಚ್ಯುತನ||
ಚಿತ್ರ ಶಂಕರ್ ಚಂದಮಾಮ



ಕಾಣುತೀ ರಘುಜನ ಸುದರುಶನ|
ಪಾಣಿಯೆಂದೇ ಮಾಡಿದನು ಪರಿ|
ಮಾಣುವೆಂತುಟೊ ಪವನಸುತನ
ಪರೇಂಗಿತಜ್ಞತೆಯ||
ಕಾಣವರಸಿ ಸಮಸ್ತನಿಗಮ|
ಶ್ರೇಣಿ ತನ್ನಯ ತಾಯ ನುಡಿ ತಾ|
ರ್ಕಾಣೆಯಾಯ್ತೆಂದಂಘ್ರಿಗಾನತನಾದನಾ
ಹನುಮ||

ಚಿತ್ರ, ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ತರಿಸಿದನು ಬಳಿಕಬಲೆ ಬಿಸುಟಾ|
ಭರಣವನು ರಾಜೇಂದ್ರ ಕಂತಾ|
ಭರಣ ಚಿತ್ತೈಸೆನುತ ಮುಂದಿರಿಸಿದನು
ರಘುಪತಿಯ||
ಸ್ಫುರಿಸಿದವು ಸೀತಾಕೃತಿಯಲಾ|
ಭರಣವವ ಕಂಡರಸ ತಂದನು|
ಕರತಲದಲುದಕವನು ಹೊಳೆಹೊಳೆವಂಬ
ಕಂಗಳಲಿ||
ಚಿತ್ರ ಶಂಕರ್ ಚಂದಮಾಮ


ಅಹುದು ಮತ್ತೇನನುಜ ನೋಡಿವು|
ಮಹಿಜೆಯಮಳಾಭರಣಗಳು ತಾ|
ನಹವೆ ನೋಡೆನಲೊಗುವ ದೃಗುವಾರಿಗಳ
ಧಾರೆಯಲಿ||
ಅಹುದಿದಲ್ಲೆಂಬೆಣಿಕೆ ಮನದಲಿ|
ವಹಿಸಲರಿಯದೆ ನೂಪುರಂಗಳಿ|
ವಹುದೆನುತ ಕೆಲತೆಗೆದು ತಲೆಗುತ್ತಿದನು
ಸೌಮಿತ್ರಿ||
ಚಿತ್ರ ಶಂಕರ್ ಚಂದಮಾಮ



ಬರಸೆಳೆದು ತಕ್ಕೈಸಿ ಮೈತ್ರ|
ಸ್ಫುರಣೆಯಲಿ ಮನವುಬ್ಬಿ ವಾನರ|
ರರಸನನು ಮನ್ನಿಸಿದನುಚಿತ
ಸುಭಾಷಿತಂಗಳಲಿ||
ಧುರವಿಜಯ ನಳ ನೀಲ ತಾರಾ|
ದ್ಯರುಗಳನುಮತದಿಂದ ತೊರವೆಯ|
ಪುರವರಾಧಿಪನಿದ್ದನಾ ವರ ಋಷ್ಯಮೂಕದಲಿ||
ಚಿತ್ರ ಶಂಕರ್ ಚಂದಮಾಮ



ಹಗೆತನವು ನಿನಗೇನು ಕಾರಣ|
ಚಿಗುರಿದುದು ನಿಮ್ಮಣ್ಣನಿಂದೆನೆ|
ತೆಗೆದನನಿತರ ಮೇಲೆ ಕಥೆಯನು ಪೂರ್ವ
ಪದ್ಧತಿಯ||
ಸಗರಕುಲ ಚಿತ್ತೈಸು ಯಕ್ಷನ|
ಮಗಳನಾ ಮಾಯಾವಿಯೆಂಬವ|
ನುಗಿದು ಕಳವಿನಲೊಯ್ಯುತಿರೆ
ಮೊರೆಯಿಟ್ಟಳಭ್ರದಲಿ||
ಚಿತ್ರ ಶಂಕರ್ ಚಂದಮಾಮ



ಬಾರದಿರು ಬೆಂಬಳಿಯ ಬಿಲನ|
ದ್ವಾರವನು ಕಾದಿರು ಮಗುಳ್ದವ|
ಬಾರದಂತಿರೆ ಬೇಹು ನಿನಗೆಂದೆನ್ನನಲ್ಲಿರಿಸಿ||
ಹೋರಿದರು ಹದಿನೈದು ವರುಷವು
ತೀರುವನ್ನಬರಲ್ಲಿ ವಿಲಯ|
ದ್ವಾರಮುಖನಾದನು ಬಳಿಕ್ಕವನರಸ ಕೇಳೆಂದ||
ಚಿತ್ರ ಶಂಕರ್ ಚಂದಮಾಮ



ಸಾವುತಾ ರಕ್ಕಸನು ಹಾ ಸು|ಗ್ರೀವ
ಹಾಯೆನುತೊರಲಿ ರಣದಲಿ|
ಜೀವವನು ಜಾರಿಸಿದನಾ ಧ್ವನಿಗೇಳಿಸಿತು ಕಿವಿಗೆ||
ತೀವಿದತಿಭಯದಲಿ ಮಹೋಗ್ರ|
ಗ್ರಾವಣಿಕೆಯೆನಿಪದ್ರಿಯನು ಕಿ|
ತ್ತಾ ವಿವರ ಕುಹರದಲಿ ಕೀಲನು ಕೊಟ್ಟೆ
ನಾನೆಂದ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ಸಾರಿದೆನು ನಗರವನು ಕಪಿಸಂ|
ಸ್ಕಾರವನು ಮಾಡಿದೆನು ರಾಜ್ಯ|
ಶ್ರೀರಮಣಿಗರಸಾದೆನರಸಿದನಣ್ಣನಾ ಬಿಲನ||
ದ್ವಾರವನು ಬಳಕಿಕಲ್ಲಿ ಕಾಣದೆ|
ಧಾರಣಿಯನೊಡೆತಿವಿದು ವಿಲಯದ|
ಭೈರವನವೊಲು ಬಂದು ತನ್ನನು ಕೊಲಲು
ಮನದಂದ||
ಚಿತ್ರ ಶಂಕರ್ ಚಂದಮಾಮ



ದೇವ ಬಳಿಕೀಚೆಯಲಿ ಗತ ಮಾ|
ಯಾವಿಯಯ್ಯನು ಮಗನ ಕೊಂದವ|
ನಾವನೆಂದರಿಯಲು ಸುರೇಂದ್ರನ ಬೇಡಿದನು
ರಣವ||
ದೇವಪತಿಯವಗಂಜಿ ಶೂಲುಯ|
ಮಾವನನು ತೋರಿದನು ಬಳಿಕಾ|
ಗ್ರಾವಪತಿ ಕೈಮುಗಿದು ಕಳುಹಿದನಬುಧಿಪನ
ಬಳಿಗೆ||
ಚಿತ್ರ ಶಂಕರ್ ಚಂದಮಾಮ


ನಿಲಲರಿಯದಾ ವರುಣ ತರಣಿಯ|
ಬಳಿಗೆ ಕಳುಹಿದನಾತನೀತನ|
ಕಲಹಕಾರ್ಯಸ್ಥಿತಿಯನರಿದನುಮಾನಮಾರ್ಗದ
ಲಿ||
ಎಲವೊ ರಕ್ಕಸ ನಿನ್ನ ತನುಜನ|
ತಲೆಯ ತರಿದವನೆನ್ನ ತನಯನ|
ಕೊಲೆಗೆ ಕೊಟ್ಟವನೊಬ್ಬನೇ ಹೋಗವನ
ಬಳಿಗೆಂದ||
ಚಿತ್ರ ಶಂಕರ್ ಚಂದಮಾಮ



ಅವನಲೇ ಮಹಿಷಾಸುರನ ಸಹ|
ಭವನು ದುಂದುಭಿಯೆಂಬ ಹೆಸರವ|
ಗವನಿಪತಿ ಚಿತ್ತೈಸು
ಹೊಗಳುವೆವೇನನವನದಟ||ಶಿವನಕೂಡೆ
ಗಜಾಸುರನು ವಿ|
ಷ್ಣುವಿನೊಡನೆ ಕೈಟಭನು
ಹೋರಿದ|.ಲವಣಿಯಲಿ ಹೋರಿದನು
ಹರಿಸಂಭವನೊಳವನೆಂದ||
ಚಿತ್ರ ಶಂಕರ್ ಚಂದಮಾಮ



ವಿಶ್ರಮಸ್ಥಳವೆಮಗಿದೇ ಮಹ|
ದಾಶ್ರಯವು ನಮ್ಮಯ ತಪಕ್ಕೆ ಸ|
ಹಸ್ರನಯನನಸುತನ ಘಲ್ಲಣೆ
ಘನವಲಾಯೆನುತ||
ವಿಶ್ರುತಾರುಣ ನಯನನಾ ಬಲ|
ವಿಶ್ರುತಂಗಿತ್ತನು ಮದೀಯ ಮ|ಮಹಾಶ್ರಕೆ ಬರೆ
ಮರಣ ಮೈಗೊಡಲೆಂದು ಶಾಪವನು||
ಚಿತ್ರ ಶಂಕರ್ ಚಂದಮಾಮ


ದಿನಪನದರಿಂದೆನ್ನನಂದಾ|
ಮುನಿಯ ಕೈಯಲಿ ಕೊಟ್ಟನಂದಿಂ|
ದೆನಗೆ ನೆಲೆವನೆಯಾದುದೀ ಗಿರಿ ಸೇರಿದರು
ಬಳಿಕ||
ಹನುಮ ನಳ ನೀಲಾದಿಗಳು ದಿನ|
ದಿನಕೆ ಬೆಳೆದುದು ವೈರವಣ್ಣಂ|
ಗೆನಗೆ ಹೆಂಬಳಿಯಿಂದ ಹದನಿದು ದೇವ
ಕೇಳೆಂದ||

ಚಿತ್ರ ಶಂಕರ್ ಚಂದಮಾಮ



ವಾಸಿ ಲೇಸಭಿಮಾನ ಮಾರ್ಗದ|
ವಾಸಿವಾಳಿಕೆ ಲೇಸು ಕಂಡೆವು|
ದೋಷವನು ದುರ್ಜನಗೆ ನಿನಗಿನ್ನಾವ ಭಯ
ಬೇಡ||
ವಾಸವನ ನಗರದಲಿ ವಾನರ|
ವಾಸವನ ನಿಲಿಸುವೆನು ನಿನ್ನ ಸು|
ವಾಸಿನಿಯ ಬಳುವಳಿಗೆ ಜಯಸಿರಿವಧುವ
ನಿನಗೆಂದ||
ಚಿತ್ರ ಶಂಕರ್ ಚಂದಮಾಮ



ಕೆಲಸವಿದು ಸಂಘಟಿಸೆ ದೇವರ|
ಕಲಹಕೊಪ್ಪಿಸಿಕೊಡುವೆನಾ ದಶ|
ಗಳನನೆನೆ ಸಾಕೆಂದು ಸತ್ಯವಚೋವಿಲಾಸದಲಿ||
ಕಲಿಗಳಿಬ್ಬರು ಮಾಡಿದರು ನಿ|
ರ್ಮಳ ಸುಭಾಷಾಸಮಯವನು ಕರ|
ತಳದ ನಂಬುಗೆಗಳಲಿ ನಿರ್ಮಿಸಿದಗ್ನಿಸಾಕ್ಷಿಯಲಿ||
ಚಿತ್ರ ಶಂಕರ್ ಚಂದಮಾಮ


ಕಂದ ಕೇಳ್ಳೈ ಭಾಷೆ ಭಟರಿಗೆ|
ಸಂದುದೀ ಪರಿ ಮನವು ರವಿಜಗೆ|
ನಿಂದು ನಿಲಲರಿಯದೆ ಪರೀಕ್ಷೆಗೆ ಮಾಡಿದನು ಮನವ||
ಒಂದು ಬಿನ್ನಹ ಜೀಯ ಬಿದ್ದಿಹ|
ದುಂದುಭಿಯ ವಿಗ್ರಹವನಿದ ಕೆಲ|
ಕೊಂದಿಸಿದ ಭಟ ಗೆಲುವನಣ್ಣನನೆಂದು ಕೈಮುಗಿದ||

ಚಿತ್ರ ಶಂಕರ್ ಚಂದಮಾಮ

ಅರಸ ಚಿತ್ರೈಸೇಳು ತಾಳಿವೆ|
ಸರಿಸದಲಿ ದೈವಿಕದ ಮರನಿವ|
ನುರಗನಂದದ ದೈತ್ಯಮುನಿ ಧರಿಸಿಹನು
ವಿತಳದಲಿ||
ಸುರರಿಗಸದಳವಿವು ಬಳಿಕ್ಕಿವ|
ನೆರಡು ಕಡಿಮಾಡಿದರಡ ಕದನದ|
ಲರಿವಧಾ ಸಮಯಕ್ಕೆ
ಸಂಪ್ರತಿಯಹುದಲೇಯೆಂದ||

ಚಿತ್ರ ಶಂಕರ್ ಚಂದಮಾಮ


ಅಹುದು ಮತ್ತೇನೆನುತ ನೃಪ ನಿಜ|
ಸಹಭವನ ಮೊಗನೋಡಲಿತ್ತನು|
ವಿಹಿತ ಸಮಯೋಚಿತ ಶರಾಸನವನು
ಮಹೀಪತಿಗೆ||
ಅಹಿಯರೂಪಿನ ದಾನವನ ವಿ|
ಗ್ರಹವನುಂಗುಟದಗ್ರದಲಿ ಜಡಿ|
ದಹಿಮಕರಸುತ ನೋಡೆನುತ ಕೆಡಯೆಚ್ಚು
ಬೊಬ್ಬಿರಿದ||

ಚಿತ್ರ ಶಂಕರ್ ಚಂದಮಾಮ



ಜೂಜು ಸೋತಡೆ ಸೋಲುವುದೆ ಮರು|
ಜೂಜು ಸಾಕಿನ್ನದರ ಮಾತೇ|
ನಾಜಿರಂಗದಲಿಂದು ನಿನ್ನಯ
ಭಟಶಿರೋಮಣಿಯ||
ಪೈಜೆಗಾರನ ಗೆಲಿದಡಹುದು ಬಿ|
ಡೌಜಸುತನೆಂಬಗ್ಗಳಿಕೆ ನಿ|
ರ್ವ್ಯಾಜವೇಕೆನುತುಲಿದರಿದಿರಲಿ ಚರರು
ಕಪಿಪತಿಯ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಆ ಸಮಯದಲಿ ತಾರೆ ಬಂದು ನಿ|
ಜೇಶನೊಡನಿಂತೆಂದಳಿನಜನ|
ದಾಶರಥಿ ಪತಿಕರಿಸಿದನು ಗಡ ಪರಮ
ಮೈತ್ರಿಯಲಿ||
ವಾಸಿ ಬಿದ್ದುದು ಗಡ ತದೀಯ ಮ|
ಹೀಶನಲಿ ತಮ್ಮನಲಿ ತೋಟಿಯ|
ಜೈಸುವಾಯತಿಕೆಯ ವಿಚಾರಿಸಿ ನೆಗಳುವುದು
ರಣವ||
ಚಿತ್ರ ಶಂಕರ್ ಚಂದಮಾಮ



ಆ ಮಹೀಪತಿಯಂಗನೆಯನು|
ದ್ದಾಮಬಲ ದಶಕಂಠ ಬನದಲಿ|
ಮೈಮರಸಿ ಕೊಂಡೊಯ್ದ ಗಡ ಬರವಾಯ್ತು ಗಡ ಬಳಿಕ||
ಈ ಮಹೀಮಂಡಲಕೆ ರುಮೆಯನು|
ಕಾಮಿಸುವ ಕಪಿ ಕಂಡು ಭಾಷೆಯ|
ನಾ ಮಹಿಪನಲಿ ಕೊಂಡು
ಕೊಲಲ್ಯೈತಂದನಾಜಿಯಲಿ||
ಚಿತ್ರ ಶಂಕರ್ ಚಂದಮಾಮ



ಮರುಳಲಾಯೆಲೆ ತಾರೆ ತನ್ನಯ|
ಪರಿಯನರಿಯಾ ನೀನು ಧುರದಲಿ|
ಹರಿಹರಬ್ರಹ್ಮಾದಿಗಳ ತಾ ಬಗೆಯನೆಂಬುದನು||
ತಿರುಗಿ ರುಮೆಯನು ಕೊಟ್ಟು ತಮ್ಮನ|
ಕರೆಸಿಕೊಂಬೀ ಹೇಸಿಕೆಯ ನಿಜ|
ಶಿರದೊಳಾನುವನಲ್ಲೆನುತ ನಡೆತಂದನಾಹವಕೆ||

ಚಿತ್ರ ಶಂಕರ್ ಚಂದಮಾಮ



ಅಬ್ಬರಿಸಿ ಬಲುಮುಷ್ಟಿಗಳ ನಭ|
ಕೆಬ್ಬಿಸುತ ಕಯ್ದುಡುಕಿದರು ಸುರ|
ರುಬ್ಬಿರಿಯೆ ಸುಳಿಸಿದರು ಮುಷ್ಟಿಯ
ಸೂಳುಪಾಳಿಯಲಿ||
ಹಬ್ಬುಗಿಡಿಗಳ ಹೊದರರದಿವಿಗಳ|
ಗುಬ್ಬರದ ಸಬುದದಲಿ ತಾಯ್ ಮಳ|
ಲಬ್ಬುತಿರ್ದುದು ಶರಧಿಯಲಿ ತಾ
ಸೊರಹಲೇನೆಂದ||
ಚಿತ್ರ ಶಂಕರ್ ಚಂದಮಾಮ




ತಿರುಗಿದನು
ಸುರರಾಜಸುತನಸ್ತಮಯಸಮಯದಲಿ||
ಶಿರವ ತಡವರಿಸುತ ಮಹಾದೇ|
ವರಿಯ ಬವರದ ಬೋಳಕೊಮ್ಮಿಗೆ|
ಹರಣವುಳಿದುದೆಯೆನುತ ರವಿಸುತನೇರಿದನು
ಗಿರಿಯ||

ಚಿತ್ರ ಶಂಕರ್ ಚಂದಮಾಮ



ಕಾಣುತೀ ರಘುಪತಿಯ ಚಾಪಕೃ|
ಪಾಣ ಬಾಣವನೇರಿಳಿಯ ಕಡೆ|
ಗಾಣಿಕೆಯಲೀಕ್ಷಿಸಿ ಮಹಾದೇವರಿದ ಕಂಡೆವಲ||
ಪ್ರಾಣಸಖನೆಂದಿತ್ತು ಭಾಷೆಯ|
ಗೋಣ ಕೊಯ್ದೀ ಸೊಗಸು ಸುಭಟ|
ಶ್ರೇಣಿಯಲಿ ಹೊಗದಮಮ ನಿನಗಿನ್ನಾರು
ಸರಿಯೆಂದ||

ಚಿತ್ರ ಶಂಕರ್ ಚಂದಮಾಮ



ಅಂಬ ಕಳುಹಿದಡಾರ ಹರಣವ|
ಕೊಂಬುದೋ ನಾನರಿಯೆನದರಿಂ|
ನಂಬಿದವರನು ಕೊಂದನೆಂಬಪಹಾಸ
ಜಗದೊಳಗೆ||
ಇಂಬುಗೊಂಬುದು ಕೇಳಿದೈ ಪ್ರತಿ|
ಬಿಂಬವಿಲ್ಲಿಬ್ಬರಿಗೆ ಶೌರ್ಯ|
ಡಂಬರದಲಾಜಿಯಲಿ ರೂಪಿನಲೆಂದನಾ ರಾಮ||
ಚಿತ್ರ ಶಂಕರ್ ಚಂದಮಾಮ



ಕರೆದು ರಘುಪತಿ ತಮ್ಮನನು ಸಂ|
ಗರದ ಕುರುಹಿಗೆ ಕೊರತೆ ಬಾರದ|
ತೆರನ ಮಾಡೆನೆ ನಳನಳಿಪ
ಗಜಪುಷ್ಪಮಾಲಿಕೆಯ||
ತಿರಿದು ತುಳಸಿಯ ದಳವನಘಶತ|
ಹರವನೆಡೆಗೆಡೆಗಿರುಕಿ ವೈರಿಯ|ಧುರವ
ಜಯಿಸೆಂದಿಕ್ಕಿದನು ಕೊರಳಲಿ ಕಪೀಶ್ವರನ||
ಚಿತ್ರ ಶಂಕರ್ ಚಂದಮಾಮ



ಕಂದ ಕೇಳ್ಳೈ ಪಕ್ಷಯುಗಳಗ|
ಳಿಂದುವಿನ ಕಳೆಯಂತೆ ಹೆಚ್ಚಿತು|
ಕುಂದಿತಿಂದ್ರಜನಿನಸುತಂಗಾಹವದ
ಸೀಮೆಯಲಿ||
ಮಂದಮತಿಗಳು ನಿಲಲು ರಘುಕುಲ|
ನಂದನನು ಕಂಡರಿದು ತಿರುವಿಗೆ|
ಸಂಧಿಸಿದನಾಲೀಢಪದದಲಮೋಘ
ಮಾರ್ಗಣವ||
ಚಿತ್ರ ಶಂಕರ್ ಚಂದಮಾಮ



ಓರೆಗಣ್ಣಲಿ ನೊಂದು ನೋಡುವ|
ಸೂರಿಯನಸುತಗಭಯಕರ ಸರ|
ಸೀರುಹವ ತೋರಿಸುತ
ತೆಗೆದಾಕರ್ಣಪರಿಯಂತ||
ನಾರಚವನುಬ್ಬಿರಿದು ಶರಷನ|
ನಾರಿಗಳುಪಿದ ಹೀನಹೃದಯನ|
ಹೇರುರವನೆಚ್ಚೊಡನೆ ಕೆಡೆಕೆಡೆಯೆನುತ
ನಡೆತಂದ||
ಚಿತ್ರ ಶಂಕರ್ ಚಂದಮಾಮ



ಭೂಸುತಾಸುತ ಕೇಳು ಪರರ ಸು|
ವಾಸಿನಿಯರಲಿ ಸೋತವಂಗುರೆ|
ಹೇಸಿ ಬಿಡದಿಹಳೇ ಭುಜಶ್ರೀ ಕಡೆಯ ಮಾತೇನು||
ಈಶ ಶಂಭು ಗಿರೀಶನಮಲ ಮ|
ಹೇಶ ಮೃತ್ಯುಂಜಯ ಪುರಾರಿ ಸ|
ದಾಶಿವ ಶ್ರೀಕಂಠ ಶರಣೆನುತೊರಗಿದನು ಮೆಲಕೆ||
ಚಿತ್ರ, ಶಂಕರ್ ಚಂದಮಾಮ



ನೆತ್ತಿಯಲಿ ಜಡೆ ಹರತ್ರಿಯಂಬಕ|
ಸುತ್ತಿದುದು ವಲ್ಕಲವು ಶಿವಶಿವ|
ಮೆತ್ತಿಕೊಂಡಿದೆ ಭಸಿತ ಮೃತ್ಯುಂಜಯ
ಮಹಾದೇವ||
ಹೊತ್ತ ಚೋಹತೆ ಚಾಳಿ ಲೇಸಾ|
ಯಿತ್ತು ನಿನಗುಪದೇಶಮಂತ್ರವ|
ನಿತ್ತವನ ವರ್ತನವದೆಂತುಟೊ ನೋಡಬೇಕೆಂದ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಗಳಿಸಬಹುದು ಕಳತ್ರ ಮಿತ್ರಾ|
ವಳಿಯನೊಡಹುಟ್ಟಿದರನೆಂತೈ|
ಗಳಿಸಬಹುದೆಂಬುಕ್ತಿಗಕಟ ವಿರಕ್ತನಾದೆನಲ||
ಲಲನೆಗೋಸುಗ ತಾಯ ಬಸುರಿಂ|
ದಿಳಿದವನ ಕೊಲಿಸಿದ ದುರಾತ್ಮನ|
ನಿಳೆಯೊಳಿರಿಸುವುದುಚಿತವೇಯೆಲೆ ದೇವ
ಕೇಳೆಂದ||

ಚಿತ್ರ ಶಂಕರ್ ಚಂದಮಾಮ



ಕೇಳಿದ್ದೈ ಕುಶ ನಿಮ್ಮ ರಘುಭೂ|
ಪಾಲಕನ ಶರಘಾತದಿಂದಸು|
ಜಾಳಿಸಿದ ಜಿಷ್ಣುವಿನ ತನುಜನ
ಮರಣವಾರ್ತೆಯನು||
ಕೇಳಿ ತಾರಾದೇವಿ ತನ್ನಯ|
ಬಾಲನಂಗದ ಸಹಿತ ಸತಿಯರ|
ಮೇಳದಾಕ್ರಂದನದಲೈದಿದಳಾತ್ಮ ವಲ್ಲಭನ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಆಯಿತೇ ಸಂತೋಷ ರಾಜ್ಯ|
ಶ್ರೀಯನನುಭವಿಸಿನ್ನು ಮದನನ|
ಬೀಯಗಕೆ ಬಿಜವಾಯ್ತು ನಿನಗೆಲೆ ರವಿಜ
ನಿಜಪತಿಯ||
ವಾಯದಲಿ ಕೊಲಿಸಿದೆ ಧರಾಚಂ|
ದ್ರಾಯತದ ಕೀರ್ತಿಯನು ಗಳಿಸಿದೆ|
ದಾಯಿಗರೊಳುತ್ತಮನಲಾ ನೀನೆಂದಳಾ ತಾರೆ||
ಚಿತ್ರ ಶಂಕರ್ ಚಂದಮಾಮ



ಅಂಗದನ ತೊಟ್ಟಿಲಲಿ ವೀರೋ|
ತ್ತುಂಗ ದಶಕಂಧರರಬ ಕಟ್ಟಿದ|
ತುಂಗವಿಕ್ರಮವೆತ್ತ ಸರಿದುದು ಸುರಕದಂಬಕವ||
ಭಂಗಿಸಿದ ದುಂದುಭಿಯ ಜೀವವ|
ಹಿಂದಗಿಸಿದ ಹೀಹಾಳಿತನದ ಭ|
ಟಾಂಗವೇನಾಯ್ತೆಂದು ದೆಸೆದೆಸೆಗೊರಲಿದಳು
ತಾರೆ||
ಚಿತ್ರ ಶಂಕರ್ ಚಂದಮಾಮ



ದಶಮುಖನ ಮೇಲಣ ವಿರೋಧ|
ವ್ಯಸನದಧಿಕಕ್ರೋಧಶಿಖಿಯನು|
ಬಿಸುಡುವರೆ ಕೊಂಡೆಯದ
ನುಡಿಗಪರಾಧಹೀನನನು||
ಬಸಿದ ಶೂಲಕೆ ಸವಣನನು ಸೇ|
ರಿಸಿದ ಗಾದೆಯ ಮೆರೆವರೇಯಪ|
ಯಶವ ಹೊತ್ತೆ ನಿರರ್ಥ ಲೋಕದೊಳೆಂದಳಾ
ತಾರೆ||

ಚಿತ್ರ ಶಂಕರ್ ಚಂದಮಾಮ


ತರಣಿತನಯಗೆ ರಾಜ್ಯಪದವಿಯ|
ವಿರಚಿಸುವುದಂಗದನ ನೊಸಲಲಿ|
ಧರಿಸುವುದು ಯುವರಾಜಪಟ್ಟವನೆಂದು
ಬೆಸವೇಳ್ದು||
ತೆರಳಿಸಿದನನುಜನು ರವಿಜನ|
ಕರೆದು ನಡೆ ನೀ ನಿನ್ನ ಪುರಕೀ|
ವರುಷಕಾಲವ ಕಳಿದು ಕಪಿಬಲಸಹಿತ
ಬಾಯೆಂದು||

ಚಿತ್ರ ಶಂಕರ್ ಚಂದಮಾಮ

ತೊರೆಗಳುಬ್ಬರದಬ್ಬರದ ಬೊ|
ಬ್ಬಿರಿತದಬುಧಿಯ ಸರಸಿಗಳ ನೀ|
ರೊರತೆಗಳ ನೆಲ ನವಘನೋದಕದುಬ್ಬು
ನಿರ್ಜರದ||
ನಿರಿಸು ನಿಡು ಜಂಝಾಸಮೀರನ|
ಬಿರಿಸು ಬೇಸರನಿತ್ತವೆನೆ ನೇ|
ಸರಗುಲಾಧಿಪಸೂನು ಕೇಳ್
ನವಮೇಘಕಾಲದಲಿ||

ಚಿತ್ರ ಶಂಕರ್ ಚಂದಮಾಮ



ಸಡಗರಿಸಿದುದು ಶಾಲಿ ಶಾಡ್ವಲ|
ದುಡಿಗೆಯಲಿ ನೆಲನಖಿಳಮೃಗ ಮದ|
ಪಡೆದವಂಚೆಗಳಿಂಚರವ ಬೀರಿದವು
ಕೊಳಗಳಲಿ||
ಮಡುಗಳಕ್ಕುಡಿಸಿದವು ಹಾವಸೆ|
ಹಿಡಿದ ಪಥ ಪಾಂಥಕರ ಪದಹತಿ||
ಗೊಡಲನಿತ್ತವು ಹೊಂಗಿದವು ಹೊಲದಲಿ
ವಿಹಂಗಚಯ||
ಚಿತ್ರ ಶಂಕರ್ ಚಂದಮಾಮ



ಸರಿದುದಾ ಶರದವನಿಪಾಲನ|
ಸಿರಿ ಕುಶಾನುಜ ಕೇಳ್ ಹಿಮಂತನ|
ಬರವಿನಲಿ
ಬಳಿಕಾದುದವನಿಪಗರಿವಧಾಸಮಯ||
ಬರವನಲ್ಲಿಂ ಮೇಲೆ ವಾನರ|
ರರಸನಲಿ ಕಾಣದೆ ಕಪೀಂದ್ರನ|
ಪರಿಯ ಕಂಡ್ಶೈಯೆಂದು ಮೆಲ್ಲನೆ
ನುಡಿದನನುಜಂಗೆ||
ಚಿತ್ರ ಶಂಕರ್ ಚಂದಮಾಮ



ಹಿರಿದು ಹವಣರಿಯದ ಕೃತಘ್ನರು|
ಧರೆಯೊಳಿಲ್ಲೆನಬೇಡ ಧರೆಯಲಿ|
ನಿರತಿಶಯ ಪುರುಷಾರ್ಥಜೀವಿಗಳಿಲ್ಲವೆನಬೇಡ||
ಸಿರಿಯಮದದಲಿ ನಮ್ಮನಾ ಕಪಿ|
ಸರಕು ಮಾಡದೆ ಕಾದ ನೀನೆ|
ಚ್ಚರಿಸಿ ಬಾ ಹೋಗೆಂದು
ನೇಮವನಿತ್ತನನುಜಂಗೆ||
ಚಿತ್ರ ಶಂಕರ್ ಚಂದಮಾಮ

ಕಾಣುತೀತನನಾ ಪ್ಲವಂಗ|
ಶ್ರೇಣಿ ದರ್ಗವನೇರಗೊಡದೆಡ|
ದಾಣದಲಿ ತರುಬಿದರು
ತರಶೈಲಾಯುಧಂಗಳಲಿ||
ಕ್ಷೋಣಿಜಾಸುತ ಕೇಳು ಬಳಿಕ|
ಕ್ಷೀಣಬಲನಾ ಬಲಿ ಮುಖಾಳಿಯ|
ಗೋಣುಗಳನೆಬ್ಬಿಸುತ ಬಂದನು ಪುರದ
ಬಾಗಿಲಿಗೆ||
ಚಿತ್ರ ಶಂಕರ್ ಚಂದಮಾಮ



ಅಂಬರ ಚರನುಂ ತಾರಾ|
ಬಿಂಬಾಧರ ಮಧುರ ಮಧುವನಾಸ್ವಾದಿಸಿ ಚಿ||
ತ್ತಂ ಬೆಂಡು ನೆಗೆಯೆ ರಾಗ ರಸಾಂ|
ಬುಧಿಯೊಳ್ ಕೂಡೆ ಮೂಡಿ ಮುಳುಗುತ್ತಿರ್ದಂ||

ಚಿತ್ರ ಶಂಕರ್ ಚಂದಮಾಮ



ಆರು ನಿಲುವರು ಲಕ್ಷ್ಮಣನ ಘನ|
ಘೋರ ಗರ್ವಾನಲನ ಮುಂದೆ ಮ|
ಹೀರುಹಾವಳಿ ಸೀದವಂಗದ ಝಳದ
ಝಾಡಿಯಲಿ||
ಭೂರಿಭೂಧರ ಬಿರಿದವಮಮ ಕ|
ಠೋರ ಸಿಂಹಧ್ವನಿಗೆ ಸಿಂಹ ಚ|
ಮೂರು ಕರಿ ಶರಭಾದಿ ಮೃಗ ಜಾರಿದವು ದೆಸೆ
ದೆಸೆಗೆ||

ಚಿತ್ರ ಶಂಕರ್ ಚಂದಮಾಮ



ಗಜಬಜವಿದೇನೆನುತ ಪವನಾ|
ತ್ಮಜನು ನಡೆತಂದಿನಕುಲೇಂದ್ರಾ|
ನುಜನ ಕಂಡೆಡಬಲದ ಕಳಕಳವನು
ನಿವಾರಿಸುತ||
ನಿಜದ ನಿರಿಗೆಯ ಭಕ್ತಿಯಲಿ ಭೂ|
ಮಿಜೆಯ ಮೈದುನನಮಲಪದಪಂ|
ಕಜಕೆ ವಿನಮಿತನಾಗಿ ತಂದನು
ರವಿಜನರಮನೆಗೆ||
ಚಿತ್ರ ಶಂಕರ್ ಚಂದಮಾಮ



ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ನುಡಿದ ದಿನಕಿವ ಬಾರನೆಂದವ|
ಗಡಿಸದಲೆ ಚಿತ್ತದಲಿ ನನ್ನಲಿ|
ತಡೆದುದಪರಾಧಾಂಶವದ ಬಿನ್ನೈಸಲೇಕಿನ್ನು||
ಹಿಡಿದೆವಡಿದೃಢವಾಗಿ ನಿಮ್ಮಡಿ|
ಯಡಿಗಳನು ನಾವಂಜಲೇಕಿ|
ನ್ನೊಡೆಯತನವಿದು ಮೆರೆದು ತನ್ನನು
ಸಲಹಬೇಕೆಂದ||

ಚಿತ್ರ ಶಂಕರ್ ಚಂದಮಾಮ



ಎಲೆ ಕಪೀಶ್ವರ ಕೇಳು ಸೀತಾ|
ಲಲನೆಯನು ನಾವಗಲಿ ತಿಂಗಳು|
ತಿಳಿಯಲ್ಯೆದಡಗಿದವು ಸ್ಯೆರಣೆ ಮಾನಭಂಗದಲಿ||
ನಿಲುವುದನುಚಿತವೆಂಬ ಚಿತ್ತದ|
ನೆಲೆಯ ನೀನೇ ನೋಡಿಕೋ ನಿ|
ನ್ನೊಳಗೆ ಹೇಳುವ ಮಾತು
ಮಗುಳೇನಿದ್ದುದೆಮಗೆಂದ||
ಚಿತ್ರ ಶಂಕರ್ ಚಂದಮಾಮ

ಬೆಸಸು ಸಾಕೆಲೆ ಜೀಯ ರಿಪು ರಾ|
ಕ್ಷಸು ರಂಜಿತ ರಾಜಮೌಳಿಯ|
ವಸತಿಯೊಳಗಡಗಿರಲಿ ಮೇಣ್
ವಾರಿರುಹವಿಷ್ಟರನ||
ಬಸುರಿನಲಿ ಹೊಕ್ಕಿರಲಿ ಮಿಕ್ಕಿನ|
ನುಸಿಗಳನು ಹೇಳದಿರು ಹೇಳಿತ|
ಹಸನೆನಲು ಮಾಡುವೆನು ಮರುಮಾತೇನು
ತನಗೆಂದ||

ಚಿತ್ರ ಶಂಕರ್ ಚಂದಮಾಮ


ಬಾ ಸುರೇಂದ್ರಜಸೂನು ಶೋಚಿ|
ಷ್ಕೇಶಸುತ ಬಾ ನಮ್ಮ ಬಲ ವಾ|
ರಾಶಿಯನು ರಾಜೇಂದ್ರಚಂದ್ರಮ
ನೋಡಲಿಂದಿನಲಿ||
ಈ ಸಮೀಪಕೆ ಬರಲೆನಲು ಪರಿ|
ಶಾಸನನ ಸಂಜ್ಞೆಯಲಿ ಬಳಿಕಾ|
ಕೀಶಬಲ ಬರುತಿರ್ದುದಗಣಿತ
ಭೂಮಿಯಗಲದಲಿ||
ಚಿತ್ರ ಶಂಕರ್ ಚಂದಮಾಮ



ಹೆಗಲ ಗಿರಿಶಿಖರಾಳಿಗಳ ಕೊಂ|
ಬುಗಿದ ಮರ ಕಂಕುಳಿನ ನಖಮುಖ|
ದಗಡುಮೋರೆಯ ಹೊರಗ ಹೊರಗ
ಹೊಸಜವ್ವನದ ಭಟನಿಕರ||
ಜಗದರಸ ರಾಮಂಗೆ ಕೈಗಳ|
ಮುಗಿಮುಗಿದು ಕೆಲಸಾರುತಿರ್ದುದು|
ಬಗೆವೆರಸಿ ಬಲಪತಿಗಳೆಪ್ಪತ್ತೇಳುಕೋಟಿಯೆನೆ||
ಚಿತ್ರ ಶಂಕರ್ ಚಂದಮಾಮ



ಇದೆ ಸಮಸ್ತ ದ್ವೀಪ ವನ ದು|
ಗ೯ದ ಕಪೀಂದ್ರರು ಜೀಯ ಚಿತ್ತೈ|
ಸಿದರ ಮಹಿಮೆಯನುಸುರಲೆನ್ನಳವಲ್ಲ
ನಿಮ್ಮಡಿಯ||
ಪದದ ಸೇವೆಗೆ ಸಲುವ ಬಲಗೈ|
ಯದಟರಿದೆ ಬವರಕ್ಕೆ ನಿಲುವ|
ಗ್ಗದ ಬಲಾನ್ವಿತ ಭೂರಿಬಲವಿದೆಯೆಂದನಾ
ರವಿಜ||
ಚಿತ್ರ ಶಂಕರ್ ಚಂದಮಾಮ


ಕರೆದು ಪಡುವಲು ಕಲಿ ಸುಷೇಣನ|
ಪರುಟವಿಸಿದನು ಶತಬಲಿಯನು|
ತ್ತರಕೆ ಮೂಡಲು ವಿನತನನು ದಕ್ಷಿಣದಿಶಾತಳಕೆ||
ವರವಿರಿಂಚಿಕುಮಾರ ಮಾರುತಿ|
ಸುರಪಸುತಸುತ ಮುಖ್ಯಭಟರನು|
ನಿರವಿಸಿದನರಿದರಸಿಬರಲು
ವಿದೇಹನಂದನೆಯ||

ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಎಸೆದುದಾ ಮಣಿಖಚಿತ ಕಿರಣ|
ಪ್ರಸರಮುದ್ರಿಕೆ ಫೂತ್ಕರಿಸಿ ಲಳಿ|
ಮಸಗಿದಹಿಪನ ಪೆಡೆವಣಿಯವೊಲು
ಕರದಲನಿಲಜನ||
ಕುಸಿದ ಮೌಳಿಯ ಕರತಳದ ಸಂ|
ಧಿಸಿದ ವದನದ ಭಕ್ತಿಭಯಮುಖ|
ರಸದ ಹನುಮನ ಕರ್ಣದಲಿ ಕಾಕುಸ್ಥನಿಂತೆಂದ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ




ರವಿಜ||

ಚಿತ್ರ-ಶಂಕರ್ ಚಂದಮಾಮ



ಹೊಕ್ಕು ಸಿಂಹಾದ್ರಿಯನು ನಾಲುಕು|
ದಿಕ್ಕಿನೆಡೆ ಮನ್ನೆಯರ ವಸುಧೆಗ|
ಳಿಕ್ಕೆಗಳ ಶೋಧಿಸುತ ನಡೆದುದು ಮುಂದೆ
ಮರುವನಕೆ||
ಇಕ್ಕೆಲದ ತರುಗುಲ್ಮಲತೆಗಳ|
ಸಿಕ್ಕುಗಳ ಮಧ್ಯದಲಿ ಧರಣಿಯ|
ಹೊಕ್ಕುಳಿನವೊಲು ಹೊಳಕಿದುದು
ಮಾಯಾಮಹಾಸರಸಿ||
ಚಿತ್ರ ಶಂಕರ್ ಚಂದಮಾಮ



ಉರುಕುಗೊಂಡರಸುಗಳ ಗರ್ವವ|
ಮುರಿದು ಮಾರಾಂತವರ ಪುರಗಳ|
ವೊರಪೆಗಳ ಹಾಯ್ದೊತ್ತಬರಸಿತು ತಿರುಗಿ
ಗೌಳವಕೆ||
ಉರುಬಿ ಘಟ್ಟಾವಳಿಯ ಪುರಗಳ|
ಲರಸಿ ಪಡುವಣ ಕಡಲ ನಡುವಣ|
ಕುರವಗಳ ಕೈದೊಳಸಿ ತಿರುಗಿತು ಸೇನೆ
ಕೊಂಕಣಕೆ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಬೆದರಿದವುಯೆಣೆವಕ್ಕಿ ಕೊಂಚೆಗ|
ಳೊದರಿಹಾಯ್ದವು ಹಂಸೆ ತುಂಡದ|
ತುದಿಯ ತಾವರೆಗಬ್ಬಿನಲಿ ಬೆಚ್ಚಿದವು ದೆಸೆದೆಸೆಗೆ||
ಗದಬದಿಸಿ ಕಾರಂಡ ಬಕ ಚೀ|
ರಿದವು ನಲಿವ ಸರೋವರದ ಸಲಿ|
ಲದ ಸಮೀಪದಲಬ್ಬರಿಪ ಕಪಿಬಲದ ಕಳಕಳಕೆ||
ಚಿತ್ರ ಶಂಕರ್ ಚಂದಮಾಮ


ಹೊಕ್ಕರೊಳಬಿದ್ದೊಂದು ನಿಮಿಷದೊ|
ಳೆಕ್ಕತುಳದಲಿ ದುರ್ಗವನು ಕೈ|
ಸಿಕ್ಕಿದವರನು ಹಿಡಿಹಿಡಿದು ಕೇಳಿದರು
ರಾವಣನ||
ಮರ್ಕಟರ ದಳದುಳದ ದೂರಿನ|
ದಕ್ಕಡೆಯತನ ಬಿದ್ದುದ್ಯೈ ಕ|
ರ್ಣಕ್ಕೆ ಕಮಲಪ್ರಿಯನಸುತ
ಸಾವರ್ಣಿನಂದನೆಯ||

ಚಿತ್ರ ಶಂಕರ್ ಚಂದಮಾಮಾ


ನೋಡನೋಡಲು ದೇಶವನು ಕಪಿ|
ಬೀಡುಬಿಡೆ ಹೊಸತಾಗಿಹುದು ನೆರೆ|
ನೋಡನೋಡಲು ನದಿನದಾದ್ರಿನಿಕುಂಜವಲ್ಲಲ್ಲಿ||
ಕೂಡೆ ಪಲ್ಲಟವಾಗಿಹುದು ಮರೆ|
ಮಾಡಿ ತಿರುಗಿಸಿತವರನಿವರೆಡೆ|
ಯಾಡಿಕೆಯಲೇ ಸರಿದವಿಪ್ಪತ್ತೇಳು ದಿನವೆಂದ||

ಚಿತ್ರ ಶಂಕರ್ ಚಂದಮಾಮ



ಮುಚ್ಚಿಕೊಳಲಕ್ಷಿಗಳ ನಿನ್ನ ಸ|
ಮುಚ್ಚಯದ ಸುಭಟಾಳಿ ನೀ ಸಹಿ|
ತಚ್ಚರಿಯ ತೋರುವೆನು ನಿಮಗೆನಲಾ
ಕ್ಷಣಾರ್ಧದಲಿ||
ಮುಚ್ಚಿದರು ಕಂಗಳನು ಕೈಗಳ|
ಮುಚ್ಚುಳಲಿ ನೆಗಹಿದಳು ರಾಮನ|
ನಚ್ಚಿನಾಳ್ಗಳನಿಳೆಗದೇನು ಸಮರ್ಥೆಯೋ ಜಗಕೆ||

ಚಿತ್ರ ಶಂಕರ್ ಚಂದಮಾಮ



ನೆಲನ ಶೋಧಿಸಿ ವರಕುಶ ಸ್ಥಂ|
ಡಿಲದಲಂತರ್ಭಾವಶುದ್ಧಿಯ|
ಲಳವಡಿಸಿದನು ನಿಯಮ
ಮೌನವಲನಶನವ್ರತವ||
ಕೆಲಸವಿದು ಲೇಸಾಗಿ ತೋರಿತು|
ಸಿಲುಕು ರಾಮನ ರಾಜಕಾರ್ಯಕೆ|
ನಿಲುಕಡೆಯದೇನೆಂದು ಚಿಂತಿಸಿದನು
ವಿರಿಂಚಿಸುತ||
ಚಿತ್ರ ಶಂಕರ್ ಚಂದಮಾಮ



ಹೊಗುವುದರಿನಗರಿಯನು ಹಗೆ|
ಕೈಮಿಗುವ ಹದನನು ಕಂಡರಾಜಿಯ|
ಲಗಧರನ ಮೆಚ್ಚಿಸುವುದಳಿವುದು
ಸಮರಭೂಮಿಯಲಿ||
ಖಗಕುಲೇಂದ್ರ ಜಟಾಯುವಿನ ಸಂ|
ಯುಗಸಮರ್ಥನ ಸಾವು ಸುರರಿಗೆ|
ಸೊಗಸದೇ ಸಂಕಲ್ಪವಿದು ತಾ ಯೋಗ್ಯವಲ್ಲೆಂದ||
ಚಿತ್ರ ಶಂಕರ್ ಚಂದಮಾಮ

ಮಾತನಿದ ಕೇಳಿದನು ಕಲಿ ಸಂ|
ಪಾತಿ ಕಿವಿಗೊಟ್ಟಳಿದನೇ ಸಹ|
ಜಾತನಕಟೆನುತಂತರಂಗವ್ಯಥೆಯ ಮರುಕದಲಿ||
ಈತಗಳು ತಾವಾರೊಯೆನುತಿನ|
ಸೂತಸುತ ಮುರಿದೇಳಲುರುಳಿತು|
ಭೀತಯಲಿ ಭಟನಿಕರ ಬೀಳುವ
ಗುಂಡಿನಂದದಲಿ||

ಚಿತ್ರ ಶಂಕರ್ ಚಂದಮಾಮ



ಅನುಜನೆನಗೆ ಜಟಾಯು ಸಾವೆಂ|
ತನುಕೊಳಿಸಿತಾರಿಂದಲೆನಲಜ|
ತನುಜ ತದ್ವೃತ್ತಾಂತವನು ಸೂರಿಯನ
ಸಾರಥಿಯ||
ತನಯಗೆಲ್ಲವನೊರೆದು ತಾವ್ ಬಂ|
ದನಿತನುಸುರಲು ಶೋಕರಸದಲಿ|
ನೆನೆದು ಮರುಗಿದನನುಜನಳಿವಿಗೆ ವೀರ
ಸಂಪಾತಿ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಸುರರ ಸಭೆಯಲಿ ತನ್ನ ತಮ್ಮನು|
ಗರುಡನಲಿ ಗರ್ವಿಸಿ ಮನೋಮ|
ತ್ಸರದ ಹಮ್ಮಿನ ಸೋಲಗೆಲವಿನ
ಸುಪ್ರತಿಜ್ಞೆಯಲಿ||
ತರಣಿಬಿಂಬವ ತುಡುಕಲಭ್ರಕೆ|
ಚರಿಸಿದನು ಸಮಗ್ರೈಯಲನುಜನ|
ಪರಿಯನರಿಯಲು ಬಾರದೆನುತ್ತೈದಿದೆನು
ಬೆಂಬಳಿಯ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಬಳಿಕಲಾ ಸಂಪಾತಿ ಸಲಿಲಾಂ|
ಜಲಿ ಮೃತಸ್ನಾನಾದಿ ಕರ್ಮವ|
ಜಲನಿಧಿಯಲೇ ಮಾಡಿ ಮೇಲಣ
ತಾಗುಬಾಗುಗಳ||
ತಿಳುಹಿ ಲಂಕಾಪುರದ ಸರಣಿಯ|
ಹೊಲಬ ತೋರಿಸಿ ಬೀಳುಕೊಂಡನು|
ಕಲಿ ಸುಪಾರ್ಶ್ವಸಮೇತ
ವರಮಾನಸಸರೋವರಕೆ||
ಚಿತ್ರ ಶಂಕರ್ ಚಂದಮಾಮ



ಕಂದ ಬಾ ಕಡುಗಲಿಯೆ ಬಾ ನಾ|
ವೆಂದ ಮಾತನು ಕೇಳಿದ್ಯೆ ನಿ|
ನ್ನಿಂದ ಮೆರೆವುದು ಕೀರ್ತಿ ರಾಮನ
ರಾಜಕಾರಿಯದ||
ಸಂದ ಭಟರಿದೆಯೇತರವ ನಾ|
ನೆಂದು ನುಡಿಯದೆ ಗುರುವಿನಾಜ್ಞೆಯಿ|
ದೆಂದು ಕೈಕೋ
ಪಯಣವಾಗೇಳೆಂದನಜಸೂನು||

ಚಿತ್ರ ಶಂಕರ್ ಚಂದಮಾಮ



ಲವನೆ ಕೇಳಾ ಮಲಯಪರ್ವತ|
ದವನಿಯಲಿ ಬಿಟ್ಟುದು ಬಲೀಮುಖ|
ನಿವಹವೆಣಿಸಿದರಲ್ಲಿ ತಿಂಗಳ ದಿವಸಕುಳಿದಿನವ||
ಅವನಿಜೆಯ ಸುದ್ದಿಯನು ಮಿಕ್ಕಿನ|
ದಿವಸದಲಿ ನಾವರಿವುದರಿದೀ|
ಹವಣಿಗುತ್ತರವೇನೆನುತ
ಬೆಸಗೊಂಡನಜಸೂನು||
ಚಿತ್ರ ಶಂಕರ್ ಚಂದಮಾಮ


ಓಟ ಭರತದ ಭರವಸದ ಹೊ|
ಯ್ಲಾಟದುರುಲಹರಿಗಳ ಲಳಿಗಳ|
ತೋಟಿಗಳ ಪಾಟೀನ ಮಕರಜಲೇಭದುಬ್ಬಿನಲಿ||
ದೂಟಿ ಗಗನಕೆ ಚಿಗಿವ ಮುಕ್ತಾ|
ಸ್ಫೋಟಕದ ಗಂಭೀರಸಬುದದ|
ಘಾಟಮುದ್ರಿತ ರೌಂದ್ರದಿಂದ ಸಮುದ್ರ
ರಂಜಿಸಿತು||

ಚಿತ್ರ ಶಂಕರ್ ಚಂದಮಾಮ

ಬಳಿಕ ಕರೆದೇಕಾಂತದಲಿ ಭುಜ|
ಬಲಗೆ ನುಡಿದನು ಮೊದಲಲೇ ಮೈ|
ಥಿಳೆಯನರಿ ಕೊಡು ರಾಘವೇಂದ್ರನ
ರಾಜಮುದ್ರಿಕೆಯ||
ಬಳಿಕ ಲಂಕಾಧಿಪನ ಮನದಳ|
ಬಳವ ತಿಳಿ ಕಾಪೇಯತನದ|
ಗ್ಗಳಿಕೆಯನು ನೆರೆಬಳಸದಿಲ್ಲಿಗೆ ಬೇಗ
ಬಾಯೆಂದ||
ಚಿತ್ರ ಶಂಕರ್ ಚಂದಮಾಮ



ಅಡಿಗೆ ಯೋಜನ ಯೋಜನವ ಮೆ|
ಲ್ಲಡಿಗೆ ಬೆಳೆವುತ ಬಂದನಿಳೆ ಕೆಳ|
ಗಡೆಗೆ ಯೋಜನ ಯೋಜನವ ತಗ್ಗಿದುದು
ನಿರ್ಗಮಕೆ||
ಕಡಲು ಕಂಪಿಸುತಿರ್ದುದಹಿಪನ|
ಹೆಡಕು ಬಾರಿಸುತಿರ್ದುದದ್ರಿಗ|
ಳೊಡೆವುತಿರ್ದವು ದೆಸೆಗಳೆಂಟರ
ಧರಣಿಧಾರಣದ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕೈಗಳನು ತತ್ಪರ್ವತಾಗ್ರದ| ಮೇಗೆ
ಬಲಿದಡಿಯೂರಿ ತನುವನು|
ತೂಗಲಿಳೆ ಸೆಳೆ ಮಂಚದವೊಲೊಲೆದುದು
ನಿಹಾರದಲಿ||
ಸೂಗುರಿಸೆ ತುದಿವಾಲವಮರರ|
ಕೂಗುಗಳ ಕಹಳೆಗಳ ಹರೆಗಳ|
ತಾಗುಗಳ ತನಿಹರುಷದಲಿ ಹಾರಿದನು
ಹನುಮಂತ||
ಚಿತ್ರ ಶಂಕರ್ ಚಂದಮಾಮ



ಸುರಪನಾ ಪವನಜನ ಪರಿಯನು|
ಪರಿಕಿಸಲು ನಿರ್ಮಿಸಿದನಾಕ್ಷಣ|
ಸುರಸೆಯನು ವಿರಸೆಯನು ಮಲೆವ ಮಹಾತಿ
ಬಲಭಟರ||
ಮರುತಜನ ಸರಣಿಯನು ತಡೆ ಹೋ|
ಗಿರದೆ ನೀನೆಂದವಳ ಕಳುಹಲು|
ಬೆರಸಿದಳು ಭೈರವತಾಯವೊಲಂಜನಾಸುತನ||
ಚಿತ್ರ ಶಂಕರ್ ಚಂದಮಾಮ



ವಾತಸುತ ಕೇಳ್ ಲೋಕದಲಿ ವಿ|
ಖ್ಯಾತರೈವರು ತಂದೆಗಳು ಪಡೆ|
ದಾತನೊಬ್ಬನು ಸ್ವಾಮಿಯೊಬ್ಬನು ಹೋಹ
ಜೀವವನು||
ಆತುಕೊಂಡವನೊಬ್ಬ ರಕ್ಷಿಸಿ|ದಾತನೊಬ್ಬನು
ಗುರುವದೊಬ್ಬನು|
ಮಾತದೇನುಳಿದದರಿನೆನಗಗ್ರಜನು ನೀನೆಂದ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಹನುಮ ಕೇಳೊಡಹುಟ್ಟಿದನು ನೀ|
ನೆನಗೆ ನಿನ್ನಯ ತಂದೆಯಿಂದೀ|
ತನು ಪುನರ್ಭವವಾಯ್ತು ಸುರಪನ ಪೂರ್ವ
ವೈರದಲಿ||
ಘನಮನೋವೇಗದಲಿ ತಂದೀ|
ವನಧಿಯಲಿ ನೂಕಿದನು ನಿನ್ನಯ|
ಜನಕನದರಿಂದೆನಗೆ ಪಿತನಾದನು ಕಣಾಯೆಂದ||
.ಚಿತ್ರ ಶಂಕರ್ ಚಂದಮಾಮ



ಆರಿ ಬೊಬ್ಬಿರಿದೊಡನೆ ಕಡುಹಿನ|
ವೀರನಾ ಸಿಂಹಿಕೆಯ ಸೀಳ್ದ ಶ|
ರೀರದೊಳಗೊಂದೆಡದಭಾಗದ ಹೋಳ
ದಶಶಿರನ||
ಊರಿಗಿಟ್ಟನು ಮಿಕ್ಕ ಹೋಳನು|
ದಾರಬಲ ಬಲಿಮುಖ ಕುಲೇಂದ್ರ ಕು|
ಮಾರ ಜಾಂಬವದೇವರಿದ್ದೆಡೆಗಿಟ್ಟು ಬೊಬ್ಬಿರಿದ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಅವರ ವಂಚಿಸಿ ಮೆಲ್ಲನೀತನು|
ಕವಿವ ಕತ್ತಲೆಯೊಳಗೆ ಹೆಜ್ಜೆಯ|
ಸವೆಸಲರಿದಾ ಸಮಯದಲಿ ಹರಿತಂದಳಾ
ಪುರವ||
ದಿವದಲುಗುಳುವ ರಾತ್ರಿಯಲಿ ನುಂ|
ಗುವ ಮಹಾದ್ಭುತ ಘೋರ ರಕ್ಕಸ|
ಯುವತಿ ಲಂಕಿಣಿಯೆಂಬವಳು
ರಕ್ಕಸಿಯರೊಡಗೂಡಿ||
ಚಿತ್ರ ಎಂಟಿವಿ ಆಚಾರ್ಯ ಚಂದಮಾಮ


ಎಲ್ಲಿಗೆಲವೋ ಹೋಗದಿರು ಕಪಿ|
ನಿಲ್ಲಿದೇತರ ಕೆಲಸ ಬೇಹಿನ|
ಭುಲ್ಲವಣೆ ಬಾರಿಸುತಲಿದೆ ನೆರೆ ನಿನ್ನ
ಮೋರೆಯಲಿ||
ನಿಲ್ಲುನಿಲ್ಲೆಂದೆನಲು ಚೌಪಟ|
ಮಲ್ಲನದ ಲೆಕ್ಕಿಸದೆ ಮುಂದಕೆ|
ನಿಲ್ಲದಡಿಯಿಡೆ ಹಿಡಿದಳೀತನ ಹೆಡಕ ಹದಿರಿನಲಿ||
ಚಿತ್ರ ಶಂಕರ್ ಚಂದಮಾಮ
SANKAR



ಹೆಡಕ ಹಿಡಿದಳೊ ಹಿಡಿಯಳೋ ಕೆಲ|
ಸಿಡಿದು ತಿವಿದನು ತೀವ್ರಮುಷ್ಟಿಯ|
ಲಡಿಮಗುಚಿ ಬಿದ್ದಳು ಪುರದ್ವಾರದ
ಮಹಾಸೌಧ||
ಹುಡಿಗೆದರಿ ಸುಳಿವಸುರರಸುಗಳು|
ಸಡಿಲೆ ರಕುತವ ಕಾರುತೆಡಬಲ|
ದಡಬಳರ ಸದೆದೀತ ತಪ್ಪಿಸಿ
ಹಾಯ್ದನೂರೊಳಗೆ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ

ಅಂಗಡಿಗಳೊತ್ತಿನಲಿ ರಕ್ಕಸ|
ರಂಗಣಗಳಲಿ ದೇವತಾಭವ|
ನಂಗಳಲಿ ಕೋಠಾರಮಂಟೆಯ
ಸಂದಿಗೊಂದಿಯಲಿ||
ಹಿಂಗದೋಸರಗೇಳುತವೆ ಸೀ|
ತಾಂಗನೆಯ ನುಡಿ ಹುಟ್ಟಿದೇಯೆನು|
ತಂಗಲಾಚುತ ಬೀದಿಯಗಲಕೆ ನೋಡುತೈತಂದ||
ಚಿತ್ರ ಶಂಕರ್ ಚಂದಮಾಮ

ಮನೆಮನೆಗಳಲಿ ಪುರಜನಂಗಳ|
ಕನಸಿನಲಿ ತಿಳಿದೆದ್ದ ನಿದ್ರೆಯ|
ಜನದ ಲೋಚನವೀಥಿಯಲಿ
ವಿವಿಧಾಲಯಂಗಳಲಿ||
ಹನುಮಮಯವಾಗಿರ್ದುದೈ ನೃಪ|
ತನುಜ ಕೇಳರಸಿದನು ಸೀತಾ|
ವನಿತೆಯನು ವೈಚಿತ್ರಗತಿಯ ಜವಾಯ್ಲ
ಜೋಕೆಯಲಿ||
ಚಿತ್ರ ಶಂಕರ್ ಚಂದಮಾಮ



ಕಳಿದು ಮುಂದಣ ವಿವಿಧ ಮಣಿಮಂ|
ಜುಳ ಮುಖದ್ವಾರಗಳ ಬಲಿದ|
ಗ್ಗಳವ ಮುರಿದೊಳಹೊಕ್ಕನೀಪರಿ ಕಣೆಯ
ಕಣೆಯದಲಿ||
ಎಲೆ ಕುಮಾರರರೆ ಕೇಳಿರೈ ಕಂ|
ಗೊಳಿಸಿತಿದಿರಲಿ ಕಾಮಕೇಳೀ|
ವಿಲಸಿತನ ರಾವಣನ ರಂಜಿತ ರಾಜಮಣಿಭವನ||
ಚಿತ್ರ ಶಂಕರ್ ಚಂದಮಾಮ




ಕದ್ದ ಕಳ್ಳನ ಖಳನ ಸೆಜ್ಜೆಯಸದನಕೈತಂದ||

ಚಿತ್ರ ಶಂಕರ್ ಚಂದಮಾಮ

ಬೆರಸುವಳೆ ಸುರಗಂಗೆ ಕಾದಂ|
ಬರಿಯ ಕಡಲನು ಸಂಶಯದ ಸಂ|
ಕರವ ಸಂಘಟಿಸಿದೆನಲಾ ಸಿರಿರಾಮರಾಮೆನುತ||
ಹಿರಿದು ಪರಿತಾಪದಲಿ ದೇಹವ|
ನುರುಹಿಕೊಂಡು ಪುರಾರಿ ಶಂಕರ|
ಹರತ್ರಯಂಬಕಯೆನುತ ತಲೆಗೊಡಹಿದನು
ಕಲಿಹನುಮ||
ಚಿತ್ರ ಶಂಕರ್ ಚಂದಮಾಮ

ವನವಿದೊಂದಿದೆ ಗಗನದಗ್ರದ|
ಧ್ವನಿಯಿದೊಂದಿದೆ ನೋಳ್ಪೆನುಪವ|
ರ್ತನೆಯನಿಂದಿನಲೀ ಮಹಾವನದೊಳಗೆ
ಬಳಿಕಲ್ಲಿ||
ವನಜವದನೆಯ ಪಾದದರುಶನ|
ವಿನಿತರಲಿ ಸಂಘಟಿಸದಿರೆ ಕಂ|
ಡನುವ ಕಾಬೆನೆನುತ್ತಶೋಕಾವನಕೆ ಪುಟನೆಗೆದ||
ಚಿತ್ರ ಶಂಕರ್ ಚಂದಮಾಮ

ನನೆಮುಗುಳ್ಗನೆಕುಸುಮ ನಸುಗಾಯ್|
ಕನರುಗಾಯ್ ಕಸುಗಾಯಿ ಹುಳಿಗಾಯ್|
ತನಿರಸದ ಮಧುರಾಮೃಪೂರಿತ
ಮಾಧುರೀಯಕದ||
ತೊನೆದು ತೂಗುವ ಫಲಭರಂಗಳ|
ಘನತರದ ಸಹಕಾರಸಹ ಸುರ|
ವನಕದಂಬಕವೆಸೆದುದಿದಿರಲಿ ಕಪಿಕುಲೇಶ್ವರನ||
ಚಿತ್ರ ಶಂಕರ್ ಚಂದಮಾಮ

ವಸುಮತೀಪತಿಸೂನು ಕೇಳ್ ಬ|
ಣ್ಣಿಸಲು ತೀರದು ತನಗೆ ಚೈತ್ರನ|
ವಸತಿಯೋ ಸೌಗಂಧಮಂದಾನಿಲನ
ನೆಲೆವನೆಯೊ||
ಕುಸುಮಬಾಣನ ಬೀಡೊ ಸುರವನ|
ದೆಸೆವ ಜನ್ಮನಿವಾಸವೆನೆ ವನ|
ವೆಸೆದುದಾ ಸಿರಿರಾಮಚಂದ್ರನ ಚರನ ಕಣ್ಮನಕೆ||
ಚಿತ್ರ ಶಂಕರ್ ಚಂದಮಾಮ


ತಿಳಿಗೊಳನ ದಾಂಟುತ ಲತಾ ಮಂ|
ಮಡಳಿಯ ನುಸುಳುತ ಕುಸುಮವಲ್ಲಿಗ|
ಳೊಳಗೆ ವಿಹರಿಸುತುನ್ನತ ದ್ರುಮತತಿಯ
ಲಂಘಿಸುತ||
ಕೆಲಬಲನಾರೈವುತೊಯ್ಯನೆ|
ನಿಲುಕಿ ನೋಡುತ ಬಂದನುರು ಮಂ|
ಜುಳಫಲಾನ್ವಿತ ಶಿಂಶುಪಾದಪವಿದ್ದ ಹೊರೆಗಾಗಿ||

ಚಿತ್ರ ಶಂಕರ್ ಚಂದಮಾಮ



ಆ ಮಹಾದ್ರುಮದಡಿಯ ಕದಳಿ|
ಸ್ತೋಮಮಧ್ಯದ ದಳನಿಲಯದಲಿ|
ರಾಮನಾಮಾಮೃತ ಸಜೀವತ್ರಾಣಧಾರಣದ||
ತಾಮರಸದಳನಯನೆಯನು ನಿ|
ಸ್ಸೀಮ ಸುವ್ರತಚರಿತೆಯನು ಸೀ|
ತಾಮಹಾಲಕ್ಷ್ಮಿಯನು ಕಂಡನು
ವೀರಹನುಮಂತ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಜನನಿ ಶಿಶುವನು ಸತ್ಕುಲೀನನು|
ವಿನುತ ಸದ್ವರ್ತನೆಯ ಸತ್ಪುರು|
ಷನು ಸದಾಚಾರವನು ಸಜ್ಜನನಧಿಕ ಸದ್ಗುಣವ||
ಜನಪನೈಶ್ವರ್ಯವನು ಧರ್ಮ|
ಜ್ಞನು ಯಶೋಲಭ್ಯವನು ಸಲಹುವ|
ನೆನಹಿನವೊಲಭಿಮಾನರಕ್ಷೆಯ ಸತಿಯ ಕಪಿ
ಕಂಡ||
ಚಿತ್ರ ಶಂಕರ್ ಚಂದಮಾಮ



ಪೊಗೆಗೊಂಡ ಚಿತ್ರಲತೆ ಧೂ|
ಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜಿನಿ ಕಾ||
ರ್ಮುಗಿಲೊಳಗೊಂಡೆಳೆವೆರೆಯೆನೆ|
ಮೃಗಲೋಚನೆ ಸೀತೆ ನಾಡೆ ಪಾಡಳಿದಿರ್ದಳ್||
ಚಿತ್ರ ಶಂಕರ್ ಚಂದಮಾಮ



ಹೊಗೆಯಲೆದ ಪುತ್ಥಳಿಯವೊಲು ಹಿಮ|
ವಗಿದ ತಾವರೆಯಂತೆ ಬಿಚ್ಚದೆ|
ಬಿಗಿದ ಚಿಪ್ಪಿನ ಮುತ್ತಿನಂದದಿ ರಾಹು ಲಂಬಿಸಿದ||
ಮೃಗಧರನವೊಲು ಗೂಢದರ್ಥವ|
ತೆಗೆಯಬಾರದ ಕಾವ್ಯದವೊಲಿ|
ರ್ದಗಣಿತಾಮಲಪುಣ್ಯಚರಿತೆಯ ಕಂಡನಾ ಹನುಮ||

ಚಿತ್ರ ಶಂಕರ್ ಚಂದಮಾಮ


ಮೂರುಲೋಕದ ಗಂಡನೀತನ|
ಮೀರಲಹುದೇ ದೇವಿ ದಿವಿಜರ|
ನೀರೆಯರು ಬಯಸುವರು ಬಹುವಿಧ
ಸುವ್ರತಂಗಳಲಿ||
ಇದನು ನೀನನುಭವಿಸಲೊಲ್ಲದೆ|
ಚದುರುಗೆಡೆವರೆ ದೇವಿ ಹೇಳೆಂ|
ದದುಹಿ ಮಾರುತ್ತರವ ಕಾಣದೆ ಕೆಲಕೆ ಸಾರಿದರು||
ಚಿತ್ರ, ಶಂಕರ್ ಚಂದಮಾಮ

ತಿಳುಹಿ ತೀರಿದವೆಮ್ಮ ಬುದ್ಧಿಯ|
ಹಲವು ಬಗೆ ಬಹುವಿಧದ ಮಾಯೆಯ|
ಸುಳಿಸಿ ಸೋತೆವು ಬಳಲಿಸಿದೆವು
ಬಹುಪ್ರಕಾರದಲಿ||
ಅಳುಪ ಕಾಣೆವು ಚಿತ್ತವೃತ್ತಿಯ|
ನೆಲೆ ನಿಜೇಶನ ಮೇಲೆ ಘನ ಕೈ|
ದೊಳಸು ಕೊಳ್ಳದು ನುಡಿಸಿ ನೋಡುವುದೆಂದಳಾ
ಸರಮೆ||
ಚಿತ್ರ ಶಂಕರ್ ಚಂದಮಾಮ

ಬೆಳಗಿದವು ಬೊಂಬಾಳದೀಪಾ|
ವಳಿಗಳಿದ್ದೆಸೆಗಳಲಿ ಕಂಚುಕಿ|
ಗಳ ಘಡಾವಣೆಯಿಂದ ಬಂದೇರಿದನು
ಪುಷ್ಪಕವ||
ಹೊಳೆಹೊಳೆವ ಮಣಿಮಕುಟ ಬದ್ಧಾ|
ವಳಿಯ ಭಟರೊತ್ತೊತ್ತೆಯಲಿ ಬಂ|
ದಿಳಿದನಾ ವನಮಧ್ಯದವನೀಸುತೆಯ
ಸರಿಸದಲಿ||

ಚಿತ್ರ ಶಂಕರ್ ಚಂದಮಾಮ



ವರದುಕೂಲದ ಹಾವುಗೆಯ ಬಂ|
ಧುರದ ಗಂಧದ ದಿವ್ಯಮಾಲ್ಯಾಂ|
ಬರದ ದಿವ್ಯಾಭರಣದಬಲೆಯರುಬ್ಬುವಾತಿನಲಿ||
ಅರಸಿ ಕೇಳೀ ವೈಭವವನಾ|
ಚರಿಸಬೇಕೆಂದುಚಿತವಚನದ|
ಪರಿವಿಡಿಯಲಬಲೆಯರು ಬಿನ್ನೈಸಿದರು
ಜಾನಕಿಗೆ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಘಡ ಪತಿವ್ರತೆ ತಾನು ಗಡ ಕಾ|
ಳ್ಗಡೆದು ನುಡಿವವರಾವು ಗಡ ದಿಟ|
ಕಡಿದಲೆಯ ತಾ ಮೆಟ್ಟಿಮೀವಳು ಗಡ
ಮಹಾದೇವ||
ಒಡತಿ ಗಡ ಬಹುಸಂಪದಕೆ ಬಾಯ್|
ಬಡಿಕ ಹೆಂಗುಸ ಕೊಲುವೆವೆನುತು|
ಗ್ಗಡದ ಕೋಪದಲೆತ್ತಿದನು
ಖಂಡೆಯವನಸುರೇಂದ್ರ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ

ಮರುಳುತನ ಬೇಡೇಳು ನಡೆ ನರ|
ತರುಣಿಯೇ ತಾನೀಕೆ ಸಾಕ್ಷಾ|
ತ್ಪರಮಪುರುಷನ ಪುಣ್ಯವಧುವೆಂಬೆಣಿಕೆ
ತೋರುತಿದೆ||
ಸ್ಮರವಿಕಾರದ ಬುದ್ಧಿ ಸಾಕಿ|
ನ್ನೆರಡುಗೆಡಬೇಡೆಂದು ಮಂಡೋ|
ದರಿ ನಿಜೇಶನನೊಯ್ದಳರಮನೆಗಣುಗ
ಕೇಳೆಂದ||
ಚಿತ್ರ ಶಂಕರ್ ಚಂದಮಾಮ



ಕನಸ ಕಂಡೆನು ನಿನ್ನಿನಿರುಳಿನ|
ಕೊನೆಯಲೆಲೆ ವೈದೇಹಿ ಕೇಳ್ ಖಳ|
ಜನಪ ರಾವಣನರಿದ ತಲೆಗಳಲಳುವ
ನಾರಿಯರ||
ನಿನದದಿಂದಂತಕನ ದಿಕ್ಕಿಗೆ|
ತನುಜ ಮಿತ್ರ ಜ್ಞಾತಿ ಬಾಂಧವ|
ಜನಸಹಿತ ಗಮಿಸುವುದನೆಂದಳು ಸೀತೆಗಾ
ತ್ರಿಜಟೆ||
ಚಿತ್ರ ಶಂಕರ್ ಚಂದಮಾಮ



ಕಂಡೆನುನ್ನತಶೈಲಶಿಖರದ|
ಮಂಡೆಯಲಿ ಮೂರ್ಧಾಭಿಷೇಕದ|
ದಂಡಿಯನು ಧಾರ್ಮಿಕಪುಲಸ್ತ್ಯಾನ್ವಯ
ವಿಭೀಷಣನ||
ಕಂಡ ಕನಸಿದು ದೇವಿ ನಿಮ್ಮಯ|
ಗಂಡನಭ್ಯುದಯವನ್ನು ಕಾಬಿರಿ|
ಕೊಂಡುಕೊನರದಿರರಸಿ ಚಿಂತೆಯನೆಂದಳಾ
ತ್ರಿಜಟೆ||
ಚಿತ್ರ ಶಂಕರ್ ಚಂದಮಾಮ

ಧವಳದಂತಿಯ ಹೆಗಲಿನಲಿ ರಾ|
ಘವನ ಕಂಡೆನು ಪೃಥುಳಸಿತ ಪುಂ|
ಗವವನೇರಿರ್ದುದನು ಕಂಡೆನು
ರಾಘವಾನುಜನ||
ವಿವಿಧ ಮುಕ್ತಾಭರಣ ಮಂಗಳ|
ನಿವಸನಾಲಂಕಾರದಲಿ ನಿ|
ಮ್ಮವನು ಕಂಡೆನು
ತೊಡೆಯಮೇಲಿನವಂಶವಲ್ಲಭನ||
ಚಿತ್ರ ಶಂಕರ್ ಚಂದಮಾಮ



ದೇವಿಯರೆ ನಿಜಪತಿಯ ಪದರಾ|
ಜೀವವತಿಸುಕ್ಷೇಮ ಲಕ್ಷ್ಮಣ|
ದೇವಬಲ್ಲಿದನಧಿಕಬಲ ಬಲಿಮುಖಕುಲಾಧಿಪನ||
ಭಾವ ಕರಲೇಸೆನ್ನನಿಲ್ಲಿಗೆ|
ಮೂವರವರಟ್ಟಿದರು ಸೀತಾ|
ದೇವಿಯರ ನೀ ನೋಡಿ ಬಾ ಹೋಗೆಂದು ಗುಪ್ತದಲಿ||

ಚಿತ್ರ ಶಂಕರ್ ಚಂದಮಾಮ



ಬಂದೆನಬುಧಿಯ ದಾಂಟಿ ಕಂಡೆನು|
ಸಂದ ಸುವ್ರತೆಯಂಘ್ರಿಕಮಲವ|
ನೆಂದೆನಲು ಮೊಗದಿರುಹಿ ನೋಡಿದಳಾ
ಮಹೀರುಹವ||
ಹೊಂದಿಕೆಯ ಹೊಲಬಲ್ಲವೀ ನುಡಿ|
ಯೆಂದು ಸತಿ ಮೊಗದಿರುಹಲೊಡನಿಂ|
ತೆಂದನಾ ಹನುಮಂತ
ಹವಣಿಸಿದುಚಿತವಚನದಲಿ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಅಂಜಲೇಕೆಲೆ ತಾಯೆ ದಾನವ|
ಭಂಜನನ ಭೃತ್ಯನು ಕಣಾ ತಾ|
ನಂಜನಾಸುತ ಹನುಮನೆಂಬು ಪೆಸರಲೇ ತನಗೆ||
ಅಂಜಬೇಡಾಸುರವಿಕಾರದ|
ರಂಜಕರು ನಾವಲ್ಲೆನುತ ಧ|
ನಂಜಯನಸಖಸೂನು ಬಿನ್ನೈಸಿದನು ಜಾನಕಿಗೆ||
ಚಿತ್ರ ಶಂಕರ್ ಚಂದಮಾಮ




ಯಾದಡಿವು ಬಳಿಕೆನ್ನ ನಂಬಲುಬೇಡ ನೀವೆಂದ||

ಚಿತ್ರ ಶಂಕರ್ ಚಂದಮಾಮ



ಒಡಬಡುವುದೊಮ್ಮೊಮ್ಮೆ ಮನ ಮ|
ತ್ತೊಡಬಡದೆ ಬೆದರುವುದು ನಿಜವನು|
ಹಿಡಿಯಲರಿಯದೆ ಹತ್ತುಗೆಯ ಹಸ್ತದ
ಕದಂಪಿನಲಿ||
ನುಡಿಯಲಮ್ಮದೆ ಕಾಂತೆಯಿರೆ ಮುಂ|
ಗುಡಿಯ ಕಿಂಕರಭಾವದಲಿ ಕಪಿ|
ನುಡಿದನವನೀನಾಥ ನೇಮವನಿತ್ತ ಕುರುಹುಗಳ||

ಚಿತ್ರ-ಶಂಕರ್ ಚಂದಮಾಮ



ಮಗುಳೆ ಮಗುಳೆ ಸುಖಾತಿಶಯದು|
ಬ್ಬುಗುಳ ರೋಮಾಂಚನದ ಹರುಷಾ|
ಶ್ರುಗಳಲಾ ಮುದ್ರಿಕೆಯ ಶಿರದಲಿ ಮಿರುಪ
ಭಾಳದಲಿ||
ದೃಗುಗಳಲಿ ಕುಚಮಧ್ಯದಲಿ ಸೊಂ|
ಪಗಿವ ಸಂತೋಷದಲಿ ಸೇರಿಸಿ|
ಸೊಗಸಿನನುಭವರತಿಯೊಳೋಲಾಡಿದಳು
ನಿಜಪತಿಯ||
ಚಿತ್ರ, ಶಂಕರ್ ಚಂದಮಾಮ




ತುದಿಗಾಗಿ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಬರಮಂ ಪೋಗುಮನಾರುಮೆತ್ತಲರಿವರ್
ಬಂದಂತೆ ಪೋದಂದು ದೋಃ|
ಪರಿಘಂ ದೂಷಿತಮಕ್ಕುಮಿಕ್ಕಿ ಖಲರಂ
ಕಿಳ್ತೀಪುರೋದ್ಯಾನಮಂ|
ಪುರಮಂ ಸುಟ್ಟು ದಶಾಸ್ಯನೆನ್ನನರಿವಂತಾನ್
ಪೋಗಿ ರಾಮಾಂಘ್ರಿ ತಾ|
ಮರಸಕ್ಕಾನತನಪ್ಪೆನೆಂಬ ಮನಮಂ ತಂದಂ
ಮರುನ್ನಂದನಂ||
ಚಿತ್ರ ಶಂಕರ್ ಚಂದಮಾಮ



ಅಗರು ಚಂದನ ಚಂಪಕಾಮಳ|
ಕಗಳ ಬಕುಳಾಶ್ವತ್ಥ ಪುನ್ನಾ|
ಗಗಳ ಘನಕರ್ಪೂರ ಕದಳಿ ಕಪಿತ್ಥ ಕೌಂಗುಗಳ||
ಬಗೆಯಲುಂಗ ವಿಳಂಗಗಳ ಸೊಂ|
ಪಗಿವ ಸಕಲ ಸುರದ್ರುಮಾಳಿಯ|
ನುಗಿದುಗಿದು ಹೂಳಿದನು
ಹರಹಿನಲಭ್ರಮಂಡಲವ||
ಚಿತ್ರ, ಶಂಕರ್ ಚಂದಮಾಮ



ಮುರಿದು ಮಾರುತಿ ಗಗನಲಂಬಿತ|
ನಿರುಪಮದ ತೋರಣದ ಕಂಬವ|
ನೆರಡನಿಕ್ಕೈಗೊಂಡು ಕವಿದೆಡಬಲದ ರಕ್ಕಸರ||
ತಿರುಹಿ ಸದೆದನು ಕಾತ ಮೆಕ್ಕೆಯ|
ಹರವರಿಯೊಳಿಭಜಾರಿವರಿವವ್ರೊ|
ಲರೆದುದಜಿಗಿಜಿಯಾಗಿ ರಣರಂಗದಲಿ
ಚತುರಂಗ||
ಚಿತ್ರ ಶಂಕರ್ ಚಂದಮಾಮ



ಎರಗಿದಶನೀಘಾತ ಮುಷ್ಟಿಯ|
ಬಿರಬಿನಲಿ ಬುಡುಬುಡಿಸಿ ನೆತ್ತರಿ|
ನೊರತೆ ಹಾಯ್ದುದು ವದನದಲಿ ನಾಸಿಕದ
ನಾಳದಲಿ||
ಅರಸಿತಕ್ಷಕುಮಾರನಸು ಜವ|
ಪುರದೊಳಳಿದ ಕುಮಾರಕರ ಖಳ|
ಶಿರವ ಕಿತ್ತಿಟ್ಟನು ದಶಾಸ್ಯನ ಸಭೆಯ ಸರಿಸದಲಿ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ಲಟಕಟಿಸಿ ಹೊಡಕರಿಸಿ ಹೊಳಕುವ|
ಭಟರ ಕವಿವಾನೆಗಳ ತೇರ್ಗಳ|
ಚಟುಲಹಯಸಂಕುಳವ ಕಾಲಾಳುಗಳ
ಸಂದಣಿಯ||
ಸ್ಫುಟವರಿಯಬಾರದವೊಲರೆದಾ|
ರ್ಭಟಿಸಿದನು ಸಂಹಾರರುದ್ರನ|
ನಟನೆಗಿಮ್ಮಿಗಿಲೆನಲು ಸಂಯುಗಲಿ
ಸಮೀರಸುತ||
Scanned by CamScanner

ಚಿತ್ರ ಶಂಕರ್ ಚಂದಮಾಮ



ಎಲ್ಲಿ ಕೋಡಗ ಬನವನರೆಹೊಡೆ|
ಹುಲ್ಲಮಾಡಿದ ಮರ್ಕಟಾಧಮ|
ನೆಲ್ಲಿ ರಾಜಕುಮಾರಕರನುನ್ಮತ್ತ ಮಾರ್ಗದಲಿ||
ಕೊಲ್ಲಗೊಲೆಯಲಿ ಕೊಂದ ವಾನರ|
ನೆಲ್ಲಿಯೆನುತುರವಣಿಸುತಾಹವ|
ಮಲ್ಲ ಹನುಮನ ಹೊರೆಗೆ ಹೊಳಸಿದನು ರಥವ||

ಚಿತ್ರ ಶಂಕರ್ ಚಂದಮಾಮ



ಬರವ ಕಂಡನು ಹನುಮ ಲಂಕೇ|
ಶ್ವರನ ಮೋಹದ ಮಗನ ಸೇನೆಯ|
ವರುಷಕಾಲದ ಕಾಳಮೇಘದ ಕಡುಬಿನಬ್ಬರಕೆ||
ಕರದಲವನಿಯನಪ್ಪಳಿಸಿ ಮೊಗ|
ಮುರಿದು ನಭವನು ನೋಳ್ಪ ಬಲುಗೇ|
ಸರಿಯವೊಲು ಹರಿನಾಥನಿರಲೈತಂದುದಾ
ಸೇನೆ||

ಚಿತ್ರ ಶಂಕರ್ ಚಂದಮಾಮ



ಒದರಿದವು ರಣವಾದ್ಯತತಿ ಖಳ|
ಕೆದರಿಕೊಂಡು ವರೂಥದಿಂದಿಳಿ|
ದೊದದೊದೆದು ಸೇದಿದನು ಕಮಲಜಪಾಶದಲಿ
ಕಪಿಯ||
ಬೆದರಿ ಹಾಯ್ದಣ್ಷಗಳು ಕೈಗಳ|
ಲೆದೆಯ ನೇವರಿಸುತ್ತ ರಣಸಂ|
ಪದದ ನರಕೇಸರಿಯ ದೂತನನ್ನೈದಿತೊಗ್ಗಿನಲಿ||
ಚಿತ್ರ ಶಂಕರ್ ಚಂದಮಾಮ



ಬರುನಗೆಯಲಿಂದ್ವ್ರಾರಿ ದಳ್ಳುರಿ|
ದುರುಗಲಿನ ಕೊಳ್ಳಿಗಳಲಿದ್ದೆಸೆ|
ಗೊರಗದಂತಿರೆ ಕಟ್ಟಿದರು ಕಂಭದಲಿ
ಹಳವಿಗೆಯ||
ಕಿರಿಕಿರಿನೆ ಹಲುಗಿರಿದು ಹಣುಗುತ|
ಗಿರಿಕುಗುಟ್ಟುತ ಮಿಣಿಕಿ ನೋಡುತ|
ಹರುವ ನಗರಕೆ ನೆನೆವುತಿರ್ದನು ಮನದೊಳಗೆ
ಹನುಮ||
ಚಿತ್ರ ಶಂಕರ್ ಚಂದಮಾಮ


ತಂದನಿಂದ್ರಾರಾತಿ ರಾಯ ರಿ|
ಪುಂದಮನ ರಾಕ್ಷಸ ಮದದ್ವಿಭ|
ವೃಂದಕಂಠೀರವನ ಖಳಕುಲ ಕಾಲಭೈರವನ||
ನಂದನವ ಕಿತ್ತಕ್ಷಮುಖ್ಯರ|
ಕೊಂದ ಕೋಡಗವಿದೆ ಮನಸಗಸ್ಸಿಗೆ|
ಬಂದ ಪರಿಯನು ಮಾಡೆನುತ
ಕೈಮುಗಿದನಯ್ಯಂಗೆ||

ಚಿತ್ರ ಶಂಕರ್ ಚಂದಮಾಮ



ಮುಗುಳುನಗೆಯಲಿ ನಗುತ ಹನುಮನ|
ಮೊಗದ ಮೋಡಿಯ ಧೂರ್ತವಚನದ|
ಬಗೆಯ ಭಂಗಿಯನಾ ಪ್ರಹಸ್ತ
ವಿವೇಕದಿಂದರಿದು||
ವಿಗಡ ಭಟನಿವ ಕುಟಿಲಶಾಖಾ|
ಮೃಗವಿವನು ನಾಡಾಡಿಕೆಯ ವನ|
ಮೃಗದ ಪರಿಯಲ್ಲಿವನ ನುಡಿಸಿದು
ನೋಡಬೇಕೆಂದ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕುಲಮದಮೊಂದು ರೂಪಮದಮೊಂದು
ವಯೋಮದಮೊಂದು ತನ್ನ ದೋ|
ರ್ಬಲಮದಮೊಂದು ಜಾತಿಮದಮೊಂದು
ಕಲಾಮದಮೊಂದು ದೇವತಾ|ಬಲಮದಮೊಂದು
ರಾಜ್ಯಮದಮೊಂದಿನಿತಿಲ್ಲದೆ ಬೇರೆ ರಾಗಮ|
ಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇನ್ ಗಡ
ಮುಂದುಗಾಣ್ಬರೇ||
ಚಿತ್ರ ಶಂಕರ್ ಚಂದಮಾಮ



ಸುತ್ತ ಸುತ್ತಲು ಬೆಳೆವುತಿರ್ದುದು|
ಹತ್ತು ನೂರಿನ್ನೂರು ತದ್ವಿಗು|
ಣೋತ್ತರದ ಪರಿವಿಡಿಯ ಪರಿವೃದ್ಧಿಯಲಿ
ಸೀರೆಗಳ||
ಸುತ್ತುತಿರ್ದರು ಬೆಳೆವುತಿರ್ದುದು|
ಹೊತ್‌ಲುಹೊತ್ತಿಗೆ ನೋಡನೋಡಲು|
ತುತ್ತಿದುದು ಕಂಗಳಿಗೆ ಕೌತುಕವಸುರವಲ್ಲಭನ||
ಚಿತ್ರ ಶಂಕರ್ ಚಂದಮಾಮ



ಊರೊಳೀತನ ಮೆರೆಸಿ ಮಹಿಜಾ|
ನಾರಿಗೀತನ ತೋರಿ ತಡೆಯದೆ|
ವಾರಿಧಿಯ ಹೊರವಡಿಸಿಬಿಡಿ
ತನ್ನೊಡೆಯನಿದ್ದೆಡೆಗೆ||
ದಾರಿದೆಗೆಯಲಿಯೆಂದು ನಾರೀ|
ಚೋರ ನೇಮಿಸೆ ಬಳಿಕ ಬಲ್ಲಿದ|
ವೀರಭಟರೊತ್ತಾಗಿ ಹೊರವಂಡಿಸಿದರನಿಲಜನ||

ಚಿತ್ರ, ಶಂಕರ್ ಚಂದಮಾಮ



ಅಧಿಕಬಲ ನಸುನಗುತಲಲ್ಲಿಯೆ|
ವಿಧಿಯ ಪಾಶವ ಹರಿದು ಕೋಪದ|
ಕದವ ಕಳಚಿದು ಕೆಕ್ಕರಿಸಿ ಕೈಯಿಕ್ಕಿ ಪರಿಘದಲಿ||
ನಿಧನಗೊಳಿಸಿದನೆಡಬಲದ ವೈ|
ಬುಧ ವಿರೋಧಿಗಳನು ಬಳಿಕ್ಕರಿ|
ವಧೆಗೆ ಹೇಸದೆ ಹನುಮ
ತಿರುಗಿದನಟ್ಟುತರಿಬಲವ||
ಚಿತ್ರ, ಶಂಕರ್ ಚಂದಮಾಮ



ಛಿಳಿಛಳಿಲ್ ಛಿಳಿಲೆಂದು ಚಿಮ್ಮಿತು|
ಜಲಜಜಾಂಡದ ಚಿಪ್ಪು ಕುದಿದುದು|
ತಳಪಳನೆ ತತ್ಕಮಲಜಾಂಡಾವರಣ ಜಲರಾಶಿ||
ಇಳಿದುದಂಬುಧಿ ಕಾದ ಕಡುಗಾ|
ವಲಿಯೊಲಾಯ್ತಿಳೆ ವಾಸುಗಿಯ ಹೆಡ|
ತಲೆಯ ಮಣಿಯರಳಿದವು
ಹೊಗಳುವೆವೇನನದ್ಭುತವ||
ಚಿತ್ರ, ವಡ್ಡಾದಿ ಪಾಪಯ್ಯ, ಚಂದಮಾಮ



ಎನ್ನಸುತನತಿಥಿ ಪೂಜೆಯ|
ನೆನ್ನಸಖಂಗಿತ್ತನಗ್ನಿಗೆಂದನುಕೂಲಂ||
ತನ್ನೊಲವಿಂದೂಡಿದನನಿ|
ಲನ್ನಯದಿಂ ಬೀಸಿಬೀಸಿ ಲಂಕಾಪುರಮಂ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ತರುಣ ಕೇಳುದಿನಾಲಗೆಗಳು|
ಬ್ಬರದೆಸಳ್ಗಳು ವಿಸ್ಫುಲಿಂಗೋ|
ತ್ಕರಪರಾಗದ ಧೂತಧಮಭ್ರಮರಮಾಲಿಕೆಯ||
ಸರಭಸದ ಸಾಗರ ಸರೋವರ|
ಸರದ ಮಧ್ಯದ ಸರಸಿಜದವೊಲು|
ಸುರಕದಂಬದ ಕಣ್ಗೆ ಕೌತುಕವಾಯ್ತು
ಪುರದಹನ||
ಚಿತ್ರ ಶಂಕರ್ ಚಂದಮಾಮ



ಬಂದ ಕೆಲಸ ಸುಸೂತ್ರವೀತನ|
ಕೆಂದು ಹಾರೈಸಿದನು ಕೈಯೊಡ|
ನಂದಗೆಟ್ಟನು ನೆನೆದು
ನಿಮಿಕುಲರಾಜನಂದನೆಯ||
ಇಂದುಮುಖಿಯೇನಾಗಿಹಳೊ ತ|
ನ್ನಿಂದ ತೋರಿತು ದೂರು ದುರ್ಭಯ|
ಸಂದಿಸದಲೇ ತಾಯನೆನುತಳವಳಿದನಾ
ಹನುಮ||

ಚಿತ್ರ, ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಅದೆ ಬರವು ಪವಮಾನಜನ ಜಯ|
ವದನವಿಕಸಿತ ವಿಸ್ತರಣದ|
ಭ್ಯುದಯಮುಖವೆಮಗರುಹುತದೆಯೆಂದಖಿಳ
ಕಪಿಸೇನೆ||
ತುದಿವೆರಳ ಬೊಬ್ಬೆಗಳ ತಿಗಗಳ|
ತದಹದಬ್ಬರವರಿಯಲೀತನ|
ನಿದಿರುಗೊಂಡೊಪ್ಪಿದರು ನಮಿಸಿದ
ಜಾಂಬವಂತಂಗೆ||
ಚಿತ್ರ ಶಂಕರ್ ಚಂದಮಾಮ



ಬಳಿಕ ಬೀಡೆತ್ತಿದುದು ಹರುಷದ|
ಹೊಳಹಿನಲಿ ಹೊದರೆದ್ದು ಗಗನದ|
ಜಲಧರದ
ಜವಗತಿಯಲದ್ರಿವನೋಪವರ್ತನವ||
ಕಳಿದು ಮಾರ್ಗಶಿರಾಸಿತದ ಶಶಿ|
|
ನಳಿನಸಖಸಂಗಮದ ದಿವಸದ|
ಲಿಳಿಯಬಿದ್ದರು ಕೋಟೆಯನು ಫಲಭರದ
ಮಧುವನದ||
ಚಿತ್ರ ಶಂಕರ್ ಚಂದಮಾಮ



ಕಾಪಿನಗ್ಗದ ದಧಿಮುಖನ ಭಟ|
ರೀ ಪಡೆಯ ಹುಗಗುಡದೆ ತಡೆಯಲು|
ತೋಪ ಸೂರೆಯಗೊಂಡು ಕೆಡಹಿದರಾ
ವನೌಕಸರ||



ಆಪರೇ ಬಳಿಕವದಿರಿವರಾ|
ಟೋಪಕೊದಗುವಡರುಣಜಲದ ವಿ|
ಲಾಪಮುಖರೈತಂದು
ದೂರಿದರಿನತನೂಜಂಗೆ||
ಚಿತ್ರ ಶಂಕರ್ ಚಂದಮಾಮ



ದೇವನಿದ್ದನು ವೀರಸುಭಟ ಸು|
ಗ್ರೀವಲಕ್ಷ್ಮಣರುಗಳ ಗಡಣದ|
ಲೀ ವನೌಕಸರಿದಿರಿನಲಿ
ಜಯಜಯನಿನಾದದಲಿ||
ತೀವಿದುತ್ಸವದಿಂದ ವಿಮಲ ಫ|
ಲಾವಳಿಯ ಕಾಣಿಕೆಯನಿತ್ತಭಿ|
ಭಾವಭಕ್ತಿಯಲೆರಗುತಿರ್ದುದು ಪದಕೆ
ರಘುಪತಿಯ||

ಚಿತ್ರ ಶಂಕರ್ ಚಂದಮಾಮ



ಅಳಿದುದನಿತರ ಮೇಲೆ ಚಿಂತಾ|
ಕುಲತೆ ರೋಮಾಂಚನದ ಹರುಷದ|
ಹೊಳೆಯಲೀಸಾಡಿದರು
ರಘುಪತಿಲಕ್ಷ್ಮಣಾದಿಗಳು||
ಬಲುಸಖರು ಬಲುಭೃತ್ಯರಿದ್ದೆಡೆ|
ಸತ್ಕೀರ್ತಿಚಂದ್ರಿಕೆ|
ಕಲಿಯೆ ಬಾಯೆಂದಪ್ಪಿದನು
ರಘುರಾಮನಲಿಜನ||
ಚಿತ್ರ ಶಂಕರ್ ಚಂದಮಾಮ



ರಣಭಯಂಕರ ಹನುಮನಾ ದಿನ|
ಮಣಿಕುಲೇಂದ್ರಂಗಮಲ ಚೂಡಾ|
ಮಣಿಯ ತಂದಿತ್ತನು ಸುರೇಂದ್ರಾದಿಗಳು
ನಲಿದಾಡೆ||



ಮುರಿದು ಚರಣಕೆ ನಮಿಸಿ ವಿಶ್ವಂ|
ಭರೆಯಸುತೆಯ ಶಿರೋಮಣಿಯ ಬಳಿ|
ಕೆರಡು ಕೈಗುಡಿತೆಯಲಿ ಧರಿಸಿ
ಮನೋನುರಾಗದಲಿ||
ಅರಸರಾಮಂಗೀಯೆ ನಗುತಾ|
ದರದಿನಾ ಹನುಮಂತದೇವನ|
ಪರಮಕರುಣಕಟಾಕ್ಷರುಚಿಯಲಿ ಹೊದೆಸಿದನು
ರಾಮ||
ಚಿತ್ರ ಶಂಕರ್ ಚಂದಮಾಮ




ಮದುವೆಯಲಿ ತನಗಿತ್ತನಿತ್ತೆನು ಸೀತೆಗಾನೆಂದ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ

ತೆರೆಯ ಗುಡಿಗಳ ಫೇನ ಪಿಂಡೋ|
ತ್ಕರದ ಧವಳಚ್ಛತ್ರದುರು ಸೀ|
ಕರದ ಚಾಮರದಮಳ ಸಲಿಲಾವರ್ತ ನರ್ತನದ||
ಭರಿತ ರವ ಘುಳುಘುಳು ನಿನಾದದ|
ಮೊರೆವ ಭೇರಿಯಲಿದಿರುಗೊಂಬಂ|
ತರರೆ ಮೆರೆದುದು ಶರಧಿ ವಸುಧಾಧೀಶ
ರಘುಪತಿಯ||

ಚಿತ್ರ ಶಂಕರ್ ಚಂದಮಾಮ



ಶರಧಿಯೇತರದೀ ಪರಾಕ್ರಮ|
ಶರಧಿಗಳಿಗೆಲೆ ಜೀಯ ದಶಕಂ|
ಧರನ ವಧೆಗೇನರಿದು ದೇವರು ನೆನೆದ
ಮೈಸಿರಿಗೆ||
ಕರೆದು ಬಟ್ಟೆಯ ಬೇಡುವುದು ಸಾ|
ಗರನ ಸಂಧಿಗೆ ಕಳುಹಿ ಕದನದ|
ಪರಿಯನರಿವುದು ಕಣೆಯವಿದು ನಮಗೆನುತ
ಕೈಮುಗಿದ||
ಚಿತ್ರ ಶಂಕರ್ ಚಂದಮಾಮ



ಕೊರಳ ಹದರಿನಲೌಕಿ ಹಿಡಿದೊಡೆ|
ಮುರಿದು ರೆಕ್ಕೆಯನಿಳುಹಿ ತಂದನು|
ಹರಿಕಲೇಂದ್ರನ ಬಳಿಗೆ ಹೊದಕುಳಿಗುಟ್ಟಲಾ
ಶುಕನ||
ವರವಭೀಷಣನವನ ಮೇಲಣ|.ಕರುಣದಲಿ
ಕೊಲಲೀಸದವನನು|
ಸೆರೆಮನೆಗೆ ನೂಕಿಸಿದನಭಿಮತದಿಂದ
ರವಿಸುತನ||
ಚಿತ್ರ ಶಂಕರ್ ಚಂದಮಾಮ



ಮತವಹುದು ತಪ್ಪಲ್ಲ ಶರಣಾ|
ಗತನ ಸೂಕ್ತಿ ನಯೋಕ್ತಿಯೆಂದಜ|
ಸುತ ಸುಷೇಣಕ ಕೇಸರಿಗಳೊಪ್ಪಿದರು
ಹರುಷದಲಿ||
ಮತವನದನೊಡಬಟ್ಟನಾ ರಘು|
ಪತಿ ಬಳಿಕ್ಕ ಮಹೋದಧಿಗೆ ಸು|
ವ್ರತವ ಕೈಗೊಂಡನು
ಮಹಾಪ್ರಾಯೋಪವೇಶನವ||
ಚಿತ್ರ ಶಂಕರ್ ಚಂದಮಾಮ



ಸವೆದವಾದಿನಕುರು ತಪಸ್ಸಿನ|
ದಿವಸ ನಾಲುಕು ಬಳಿಯ ನಿಮ್ಮಯ|
ಭುವನಪತಿ ಕಂದೆರೆದು ನೋಡಿದನಾ
ಮಹೋದಧಿಯ||
ಇವನು ನಮ್ಮನು ಬಗೆಯದಾದನೆ|
ಶಿವಶಿವಾ ನಾವಾದ ಸದರವೊ|
ಶಿವಮಹಾದೇವೆನುತ ರೌದ್ರಾವೇಶಮನನಾದ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಬಲ್ಲೆ ನಿನ್ನಂತರವ ಸಾಕಿ|
ನ್ನೆಲ್ಲಿ ಪರಿಯಂತರವು ಮರೆ ನಮ|
ಗಲ್ಲವೇತಕೆ ಕಟ್ಟುಗೊಂಬೆನು ನಳನ ಕೈಯಿಂದ||
ಕಲ್ಲಿನಲಿ ನಳನೀಗ ನಿರ್ಜರ|
ರಲ್ಲಿ ಕೃತಮುಖ ವಿಶ್ವಕರ್ಮನು|
ಬಲ್ಲೆ ನೀನೀ ಹದನ ಹೇಳುವುದೇನು ತಾನೆಂದ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಬಳಿಗೆಲಸದವರಿವರು ಗಿರಿಸಂ|
ಕುಲವ ನೀಡುವರಿವರು ಕಲುಸಂ|
ಕಲೆಯವರು ಸಂವರಣೆಯವರಿವರೆಂದು
ಬಲುಭಟರ||
ಹೊಳಕೆಗಳ ಹೊಮ್ಮರಿದು ಕೊಟ್ಟನು|
ನಳನ ವಶಕೇನೆಂಬೆ ಬೊಬ್ಬೆಯ|
ಕಳಕಳಕೆ ಕಡುಹಾಯ್ತು ಕಾಲ್ದುಳುಯಲಿ
ಕಪೀಶ್ವರನ||
ಚಿತ್ರ ಶಂಕರ್ ಚಂದಮಾಮ



ಇಟ್ಟಗಿರಿಗಳ ಹಿಡಿಹಿಡಿದು ನಳ|
ನೊಟ್ಟಿದನು ಮೆಡ್ಡಿದನು ಕಟ್ಟಿದ|
ನಿಟ್ಟಣಿಸಿ ಬಹ ಗಿರಿಯನಾ ಬಳಿಸಲಿಸಿ ಬಹ
ಗಿರಿಯ||
ಕೊಟ್ಟಗಿರಿಗಳ ಕೊಡುವ ಗಿರಿಗಳ|
ಕಟ್ಟೈಯಿ ಕೌಚಿಕ್ಕಿ ಕೋಪದ|
ದಿಟ್ಟೈಯಲಿ ಗಿರಿಬರಲಿ ಬೇಗೆಂದರುಹಿದನು
ಭಟರ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕುಶನೆ ಕೇಳ್ಳೈ ಪುಷ್ಯಶುದ್ಧದ|
ದಶಮಿಯಲಿ ದಿವಮುಖದಲಾರಂ|
ಭಿಸಿತು ಮುಗಿದುದು ಸೇತು ದಿನನಾಲ್ಕರ
ಸಮಾಪ್ತಿಯಲಿ||



ಮೂರುದಿನಪರಿಯಂತ ಹಾಯ್ದುದು|
ಥಾರುಥಟ್ಟಿನಲಂಬುಧಿಯ ಮೇ|
ಲಾರುದಿನ ಪರಿಯಂತ ಬಿಟ್ಟುದು ಬೀಡು
ಕಪಿಬಲದ||
ಬೇರೆ ಸೃಷ್ಟಿಯನಬುಜಭವ ಮುಖ|
ದೋರಿಸಿದುದಿಲ್ಲೆಂಬವೊಲು ಮೈ|
ದೋರಿದುದು ಕಪಿಸೇನೆ
ನೆಲನೆನಿತನಿತರಗಲದಲಿ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ದಿವಸ ಮೂರಕೆ ಬಂದುಬಿಟ್ಟುದು|
ಭುವನಗಿರಿಯಲಿ ಪಾಳೆಯವು ಪಾ|
ರ್ಥಿವ ಮಹಾನ್ವಯಕುಮುದ
ರಘುರಾಜೇಂದ್ರಚಂದ್ರಮನ||
ತಿವಿವ ತೀವ್ರ ಮಣಿದ್ಯುತಿಯ ಖವ|
ಖವಿಪ ಹೇಮಪ್ರಭೆಯಲಿನನು|
ಗವಸಣಿಗೆಯಿಂದುಗಿದವೊಲ್ಕಣ್ಗೆಸೆದುದರಿನಗರ||



ಚಿತ್ರ ಶಂಕರ್ ಚಂದಮಾಮ



ಜೀಯ ನಿಮ್ಮಯ ಬಳಿಗೆ ರಕ್ಕಸ|
ರಾಯ ಕಳುಹಿದನೆಮ್ಮ ನಿಮ್ಮಬು|
ಜಾಯತಾಕ್ಷಿಯ ಮನವಚಕಾಯದಲಿ
ಕಾಮಿಸದೆ||
ಕಾಯವನು ಕೈಗಾವ ನೀತಿಯ|
ದಾಯವನೆ ಕೈವಿಡಿದು ಕಪಿಕಟ|
ಕಾಯ ಸಹಿತವೆ ಹೋಗಹೇಳಿದನೆಂದರರರಸಂಗೆ||
ಚಿತ್ರ ಶಂಕರ್ ಚಂದಮಾಮ

ನೆರೆದು ಬಂದಿದೆ ಜೀಯ ಜವನು|
ರದ ಲಯಭೈರವನ ಕಲ್ಪದ|
ಹರನ ಕಲ್ಪಾಂತರ ಕಠೋರದ ಘನಕೃಶಾನುವಿನ||
ಹರಹಿನಗ್ಗದ ಸೇನೆ ಮಂದರ|
ಸುರಶಿಲೋಚ್ಚಯ ತಾರಕಾದ್ರಿಯ|
ಸರಿಸದೆಪ್ಪತ್ತೇಳು ಕೋಟಿ ಕಪೀಂದ್ರರೊಗ್ಗಿನಲಿ||
ಚಿತ್ರ ಶಂಕರ್ ಚಂದಮಾಮ



ಆ ವನೌಕಸಬಲಕೆ ಕಾಲ|
ಗ್ರೀವಗೆಣೆಯೆನಿಪತುಳಬಲ ಸು|
ಗ್ರೀವನೆಂಬ ಕಪೀಶಪತಿಯಾ ಕಪಿಕುಲೇಂದ್ರಂಗೆ||
ದೇವರಾಘವನೊಡೆಯನಾತನ|
ಮೈವಳಿಯಲದೆ ಜೀಯ ಬಾಳೆನು|
ತಾ ವಿರಿಂಚಿಪ್ರಮುಖ ದಿವಿಜಗಣಂಗಳಿದಿರಿನಲಿ||
ಚಿತ್ರ ಶಂಕರ್ ಚಂದಮಾಮ


ಎಲವೊ ಶುಕ ಕೇಳೆನ್ನುದಯವಿಡಿ|
ದಿಲಿತನಕ ಸಮಬಲರ ಕಾಣದೆ|
ಕಲಹ ನೆರೆ ಭಂಡಾರಿಸಿರ್ದುದು ಲೇಸ
ಸೂಚಿಸಿದೆ||
ಲಲನೆಯನು ಮರಳಿತ್ತು ಜೀವವ|
ಸಲಹಿಕೊಂಬೀ ಹೇಸಿಕೆಯ ಕ|
ಕ್ಕುಲಿತೆಯವನೇ ಕಾಳುಗೆಡೆಯದೆ ಕೆಲಕೆ
ಸಾರೆಂದ||

ಚಿತ್ರ ಶಂಕರ್ ಚಂದಮಾಮ




Scanned by CamScanner



ಸಂಗರಕೆ||

ಚಿತ್ರ ಶಂಕರ್ ಚಂದಮಾಮ



ಮೇಲು ದುರ್ಗದ ಕೋಟೆ ಕೊತ್ತಲ|
ದೇಳು ಸುತ್ತಿನ ಕನಕಬದ್ಧರ|
ದಾಳುವೇರಿಯ ವಿವಿಧ ರತ್ನದ ತೆನೆಯ
ತಿಂಥಿಣಿಯ||
ಸಾಲ ಸಬಳದ ಹರಿಗೆಗಳ ಕರ|
ವಾಳುಗಳ ಹೇರಿಟ್ಟಿಗಳ ಹೇ|
ರಾಳ ಕೈದುಗಳಿಂದ ಕೈದೆಗೆದೆಸೆದುದಾ ದುರ್ಗ||

ಚಿತ್ರ ಶಂಕರ್ ಚಂದಮಾಮ



ವಳಯವಳಯದ ವಂಕಗಳ ಬಾ|
ಗಿಲುಗಳುಪ್ಪರಿಗೆಗಳು ಚಂದ್ರನ|
ಕಲಶವೆನಲೊಪ್ಪಿದವು ನೆಲೆನೆಲೆಗಳ
ವಿಲಾಸದಲಿ||



ಉಗಿದು ಗವಸಣಿಗೆಯನು ಚಾಪದ|
ಹೆಗಲುಗಳನಾರೈದು ತಿರುವನು|
ನೆಗಹಿ ಬೆರಳಿನಲೇರಿಸಿದನುದ್ದಂಡ ಕಾರ್ಮುಕವ||
ಉಗಿದು ಬತ್ತಳಿಕೆಯಲಿ ನಿಶಿತಾ|
ಶುಗಸಹಿತ ನೀಡಿದನು ರಘುಪತಿ|
ನಗೆಮೊಗದಲೊಂದಂಬ
ಕಳುಹಿದನಸುರನಿದ್ದೆಡೆಗೆ||
ಚಿತ್ರ, ಶಂಕರ್ ಚಂದಮಾಮ



ತೆರಳಿ ಕೈಯೊಡನಂಬು ಸಂಧಿಸಿ|
ತಿರುಗಿ ಬಾರದ ಮುನ್ನ ವಾನರ|
ರರಸ ಲಂಘಿಸಿ ಹೊಯ್ದನಾ ದಶಶಿರನ
ಮಸ್ತಕವ||



ಹತ್ತು ಮಕುಟವನೆಡಬಲದ ಸುಭ|
ಟೋತ್ತಮರ ಸದೆಬಡಿದು ತಂದವ|
ನಿತ್ತನಂಘ್ರಿಸರೋಜಯುಗಳಕೆ
ರಾಘವೇಶ್ವರನ||



ಇರಿಸಿದನು ಸುಯ್ದಾನಕಮರೇ|
ಶ್ವರನ ಮೊಮ್ಮನ ಕರೆದು ತೆಂಕಲು|
ಹರಿಸುತನ ಪಡುವಲು ಪುರಂದರದೆಸೆಗೆ
ಪಾವಕನ|
ವರಕುಮಾರಕನನಿರಿಸಿ ತಾನು|
ತ್ತರದದಿಕ್ಕಿಗೆ ರಾಯದಳ ಸಹಿ|
ತರಿಯಮನ ನಂದನನು ನಿಂದನು
ಸಮರಭಾರದಲಿ||
ಚಿತ್ರ ಶಂಕರ್ ಚಂದಮಾಮ



ಕರೆದು ವೀರ ಮಹೋದರನ ತ|
ತ್ಪುರದ ತೆಂಕಣಭಾಗಕವನನು|
ಪರುಟವಿಸಿ ಪಡುವಲು
ಸುರೇಂದ್ರವಿರೋಧಿಯನು ಬೆಸಸಿ||
ಹರಿಹಯನ ದೆಸೆಗಾ ಪ್ರಹಸ್ತನ|
ಹುರಿಕೊಳಿಸಿ ಬಳಿಕುತ್ತರದ ಗೋ|
ಪುರಕೆ ನಡೆತಂದಿತ್ತನೋಲಗವನು ದಶಗ್ರೀವ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕಳುಹು ಸಂಧಿಗೆ ರಾಕ್ಷಸೇಂದ್ರನ|
ಬಳಿಗೆ ಚಿತ್ತದಲರಿಭಟನು ನಮ|
ಗಳುಕುವುದು ಹುಸಿಯಾದಡೆಯು
ರಾಜೋಪಚಾರವಿದು||
ಳೆದು ಬಿಡಲೀ ಮಾತ ನಮ್ಮಯ|
ಬಳಿಗೆ ಬಂದರೆ ಕಾವೆವಲ್ಲದ|
ಡಳವಡಿಸಿಕೊಂಡಿರಲಿ
ಕದನವನೆಂಬುದವಗೆಂದ||
ಚಿತ್ರ ಶಂಕರ್ ಚಂದಮಾಮ



ಮದದ ಮೋಡಿಯ ಮಂದಹಾಸದ|
ಮುದದ ಮನದ ಸ್ವಾಮಿಕಾರ್ಯಾ|
ಸ್ಪದದ ಸಂಪತ್ತಿನ ಸಘಾಡದಲಸುರನಿದಿರಿನಲಿ||
ಹುದಿದ ಗರ್ವದ ಗೌರವದಿ ಕು|
ಳ್ಳಿದನು ಕುಂಡಲಿಯಂತೆ ಲಾಂಗೂ|
ಲದ ವರಾಸನದಲಿ ನಿರೀಕ್ಷಿಸುತರಿಭಟಾವಳಿಯ||
ಚಿತ್ರ ಶಂಕರ್ ಚಂದಮಾಮ



ಹೊಸಬ ನೀನಹೆ ಕಂಗಳಗೆ ಹರ|
ವಸವೆ ಬಲ್ಲಿದನಹುದು ಕಡುಕ|ರ್ಕಶತೆಯಲಿ
ಕಂಡರಿಯಬಾರದೆ ಹೋಗಲದಕೇನು||
ಹೆಸರದೇನಂಗದನು ಪಿತನಾ|
ರಸುವ ಸಲಹಿದ ವಾಲಿಯಾತನ ತನುಜ
ತಾನೆಂದ||
ಚಿತ್ರ ಶಂಕರ್ ಚಂದಮಾಮ



ತೋಳದರ್ಪದಲುಬ್ಬಿ ವಾಲಿಯ|
ಬಾಲಕನ ಬಚ್ಚರಣೆದೊಟ್ಟಿಲ|
ಕಾಲ ದೆಸೆಯಲಿ
ಕಟ್ಟುವಡೆದವನೀತನಲ್ಲವಲೆ||



ಶೂಲಿಯಲಿ ಗರ್ವಿಸಿ ಮಹೀಧರ|
ಮೂಲದಲಿ ಕೈಸಿಕ್ಕಿ ನಾಯವೊ|
ಲೂಳಿದವ ತಾನೀತನಲ್ಲವೆ ಹೇಳಿ
ತನಗೆಂದ||



ಕೂಡೆ ಕಳಕಳವಾಯ್ತು ಹಯಕುಲ|
ಜೋಡಿಸಿದವಾಡಲೇನದ ತೇರುತೇರ್ರೈಸಿದವು
ನಿಮಿಷದಲಿ||
ಕೂಡಿತಸುರಪದಾತಿ ಲಗ್ಗೆಯ|
ಮಾಡಿ ಮುತ್ತಿದರಂಗದನ ಮು|
ಮ್ಮೋಡ ಮುರಿದುಪ್ಪರಿಸಿ ತರಣಿಯ
ತುಡುಕುವಂದದಲಿ||
ಚಿತ್ರ ಶಂಕರ್ ಚಂದಮಾಮ



ವನಿತೆ ವೇದಾವತಿಯ ಶಾಪಕೆ|
ತನುವ ತೆತ್ತವನೀತವಲ್ಲಲೆ|
ಮನದ ಭಯ ನಿಮಗೇಕೆ ತಪ್ಪದೆ ಹೇಳಿ
ನೀವೆಂದ||



ಕೆದರಿತಾ ಸಭೆ ಕೈದುಕಾರರು|
ಹೊದೆಸಿದರು ಹೊಳೆಹೊಳೆವ ಹೊಗರಿನ|
ಹೊದರುವೆಳಗಿನ ಹಲವು ಶಸ್ತ್ರಂಗಳಲಿ
ಕಪಿಭಟನ||
ಸದೆದನೊಳ ಹೊಕ್ಕವರನುಳಿದರ|
ಕೆದರಿದನು ಮಂಟಪವನೊದೆದಿಳೆ|
ಗುದುರಿಸಿದನರೆಯಟ್ಟಿ ಸದೆದನು ಸರಿಗ ರಕ್ಕಸರ||
ಚಿತ್ರ ಶಂಕರ್ ಚಂದಮಾಮ



ಹತ್ತಿದುದು ಬಳಿಕಂಬುನಿಧಿ ತಲೆ|
ಯೊತ್ತಿ ಲಯದಲಜಾಂಡಭಾಂಡದ|
ನೆತ್ತಿಗಡರ್ವಂದದಲಿ ರೊಪುದುರ್ಗವನು
ಕಪಿಸೇನೆ||
ಅತ್ತಲಾದುದು ಬೊಬ್ಬೆ ಕೋಟೆಯ|
ಕೊತ್ತಳದ ಕೋಹಿನಲಿ ಕುಂಭಿನಿ|
ಕಿತ್ತು ಹಾರಲು ಹೊಡೆವ ಹರೆ ಹದಿನೆಂಟು
ಕೋಟಿಯಲಿ||
ಚಿತ್ರ ಶಂಕರ್ ಚಂದಮಾಮ



ಕಂದ ಬಂದೈ ಸುಬಲಲತಿಕಾ|

ನಂದ ಬಂದೈ ವೀರರಸದು|

ಕ್ಕಂದ ಬಂದೈ ನಮ್ಮ ಪುಣ್ಯದಲೆಂದು

ಕರುಣದಲಿ||

ಕೊಂದ ರಕ್ಕಸ ಭಟರ ರಕುತದ|

ಬಿಂದುಗಳ ಮೈದೆರಪನತುಳಾ|

ನಂದ ಮಯನೋದಕ ಝಡಿಯ

ತಡವರಿಸಿದನು ರಾಮ||



ಮಾಯೆಯಲಿ ರಚಿಸಹಿತ ರಾಘವ|
ರಾಯನಂದದ ಶಿರವನಬುಜದ|
ಳಾಯತಾಕ್ಷಿಯ ಮುಂದೆ ತೋರಿಸಿ ಹಾಯ್ಕಿ
ಮೈವಳಿಯ||
ಮಾಯೆಯಲಿ ಮಾತಾಡಿ ಬಹಳೋ|
ಪಾಯದಿಂದೊಡಬಡಿಸಿ ತಾ ಹೋ|
ಗಾಯತಿಕೆಯ ಛಲೋಕ್ತಿ ಸರಿದರೆ ಸಾಕು
ತನಗೆಂದ||
ಚಿತ್ರ ಶಂಕರ್ ಚಂದಮಾಮ



ರಚಿಸಿದನು ಬಳಿಕವನು ಮಾಯಾ|
ರಚನೆಯಲಿ ನೃಪಶಿರವ ಸಾಧ್ವಿಯ|
ಶುಚಿಯ ಸೀತೆಯ ಬಳಿಗೆ
ತಂದವನರ್ಧರಾತ್ರಿಯಲಿ||
ವಿಚಿಕಿತಾಸ್ಫಾಲನೆಯ ವಾದ್ಯ|
ಪ್ರಚಯದುಬ್ಬಿನ ಬೊಬ್ಬೆಗಳ ಖಳ|
ನಿಚಯ ಸಹಿತೈತಂದು ಮುಂದಿಳುಹಿದನು
ಮಸ್ತಕವ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕೇಳಿದ್ಧೈ ನೃಪಸೂನು ಮಿಂಚಿನ|
ನಾಲಗೆಯ ರಕ್ಕಸನ ನುಡಿ ಕಿವಿ|
ಗೇಳಿಸಲು ಕುಡಿಯಳ್ಳೈಯನು ಕೋಲುಗಿದ
ತೆರನಂತೆ||
ಸಾಲಿಡುವ ಕಂಬನಿಯ ಮರುಕದ|
ಮಾಲೆಗಿಚ್ಚನ ಚುಚ್ಚಿನಂಗದ|
ಬಾಲೆ ಬಾಯ್ಬಿಡುತೀಕ್ಷಿದಳಾಸುರದ ಮಸ್ತಕವ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ತೀರಿತಾ ಸಮಯದಲಿ ರಜನಿ ವಿ|
ಹಾರಿಸಿದುದೆಳೆವೆಳಗು ಕಪಿಭಟ|
ರಾರುಭಟೆ ತಲೆಕೆಳಗುಮಾಡಿತು ಜಗದ
ಜೋಡಿಗಳ||
ನಾರಿ ಚಿತ್ತೈಸಿನ್ನು ತೊರವೆಯ|ರಾಯನರಹರಿ
ಹದುಳಿಗನು ಮನ|
ದಾರಟೆಯ ಬಿಡಿಯೆಂದು
ಸಂತೈಸಿದರುಜಾನಕಿಯ||
ಚಿತ್ರ ಶಂಕರ್ ಚಂದಮಾಮ



ಬಿಸುಡು ಬಿಸುಡೆಲೆ ದೇವಿ ಶಿರವವದು|
ವಸುಮತೀಶನದಲ್ಲ ಮುಟ್ಟದಿ|
ರಸುರ ಕೃತ್ಯದಕೃತಕವಿದು ಬಿಸುಡೆನುತ
ಹರಿತಂದು||
ಶಶಿಮುಖಿಯ ಸರಿಕರದ ಶಿರವನು|
ಬಸುಡಿಸಿದರಳಿದಳಕಪಂಗ್ತಿಯ|
ಪಸರಿಕೆಯ ನೇವರಿಸಿ ನಿಲಿಸಿದಳಲನವನಿಜೆಯ||
ಚಿತ್ರ ಶಂಕರ್ ಚಂದಮಾಮ

ಆನುವರು ನಿಮ್ಮವರು ನಿಮ್ಮವ|
ರಾನಿಕೆಯ ನಿಲಿಸುವರು ನಿಲುವುದು|
ಸೇನೆ ನಿಮ್ಮವರುಗಳನೌಕುವರಂತರಿಸಿ ನಿಮ್ಮ||
ಸೇನೆ ಪಡಿತಳಿಸುವುದು ಸಮರದ|
ಹಾನಿವೃದ್ಧಿಯ ಹೊಳಕೆವಾತಿನ|
ಕಾನನದ ಕತ್ತಲೆಯ ಚರಿತರು ಮೆರೆದರಾಹವವ||

ಚಿತ್ರ ಶಂಕರ್ ಚಂದಮಾಮ



ಆರು ನಿಲಲಹುದನಿಲಜನ ಘನ|
ಘೋರ ಮುಷ್ಟಿನಿಘಾತದಲಿ ಶತ|
ಧಾರ ಶತಶತಚೂರ್ಣವಹುದುಳಿದವರ
ಪಾಡೇನು||
ವೀರ ಧೂಮ್ರಾಕ್ಷನ ಕಪಾಲ ವಿ|
ದಾರಿಸಿತು ಸಮಸೀಳಿನಲಿ ಸುರ|
ನಾರಿಯರು ನಗುತವನ ಕೊಂಡೊಯ್ದರು
ಸರಾಗದಲಿ||
ಚಿತ್ರ ಶಂಕರ್ ಚಂದಮಾಮ


ಕೇಳಿರ್ದೈ ಕುಶಲವರು ಕಪಿಗಳ|
ಕಾಳಗದ ಜಯವಾರ್ತೆ ಸಭೆಯಲಿ|
ಕೇಳಿಸಿತು ಕಡುಭಯದಲಾ ಕೈಕಸೆಯ
ನಂದನನ||
ಮೌಳಿಯೊಲಹಿನಖಿಳ ಮಣಿಗಗಣ|
ಮೌಳಿಗಳ ಬೀಳ್ಕೊಟ್ಟು ಚಿಂತಾ|
ಬಾಲಕಿಯ ಬಳಿವಿಡಿದು ಹೊಕ್ಕನು ತನ್ನ
ಮಂದಿರವ||

ಚಿತ್ರ ಶಂಕರ್ ಚಂದಮಾಮ




ಬಲಗಾಳಗವಕಂಪನನ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ

ವಚಿಸಲಚ್ಚರಿಯಮಮ ಲೋಕ|
ಪ್ರಚುರನಲ್ಲಾ ಸಿರಿಯೊಳಭ|
ಶಚಿಯರಸ ಮುಖ್ಯರುಗಳೇ ಬೆಸಕೈವ
ಸೇವಕರು||
ಅಚಲ ಸಂಪದಗರಿದೆ ನೆರೆದುದು|
ವಚನಮಾತ್ರಕೆ ಬಹುಪದಾರ್ಥದ|
ರುಚಿಕರದ್ರವ್ಯಂಗಳಾರೋಗಣೆಗೆ ರಕ್ಕಸನ||
ಚಿತ್ರ ಶಂಕರ್ ಚಂದಮಾಮ



ಅಕಟ ಕೆಡಿಸಿದನನ್ಯ ವನಿತಾ|
ಸಕತಿಯಲಿ ಮನವಿಕ್ಕಿ ಮಹಿಮಾ|
ಪ್ರಕರಣದ ಪೌಲಸ್ತ್ಯವಂಶದ ವಿಮಲವೈಭವದ||
ಮಕರಕೇತನನಸ್ತ್ರ ನಿರ್ಬಾ|
ಧಕವೆಯಕಟಕಟ್ಟೈಹಿಕಾಮು|
ಷ್ಮಿಕಕೆ ಸಲ್ಲದ ಮತಿಯ ಮನದಲಿ
ನೆನೆದನೇಯೆಂದ||
ಚಿತ್ರ ಶಂಕರ್ ಚಂದಮಾಮ

ಕೇಳದಾ ಮಾರೀಚನುಚಿತವ|
ಬೀಳುಕೊಡುವುದು ನಮ್ಮದಗ್ಗದ|
ಖೂಳತನವನುಜನ ನಯೋಕ್ತಿಯ
ನೀತಿಗಳವಡದ||
ಖೂಳರೊಳಗಣ ಖೂಳತನ ಮೇ|
ಲೂಳಿಗದ ಕಪಿವರನ ಕದನದ|
ಹಾಳಿಯಲಿ ಮತಿಗೆಡುವುದಗ್ಗದ
ಖೂಳತನವೆಂದ||

ಚಿತ್ರ ಶಂಕರ್ ಚಂದಮಾಮ



ಅಂಜಿದನು ಸುಗ್ರೀವ ಪವನ ಧ|
ನಂಜಯರ ಸುತರಳವಳಿದರಾ|
ಕಂಜಸಂಭವಭವ ಸುಷೇಣ ಗವಾಕ್ಷ
ಮೊದಲಾದ||
ಅಂಜದತಿಬಲರಾನನಾಬ್ಜಕೆ|
ಮಂಜುಮುಸುಕಿತು ಮಿಕ್ಕ ಸಮರ ಸ|
ಮಂಜಸರ ಪೇಳದಿರು ಪೇಳುವೆನೇನನದ್ಭುತವ||

ಚಿತ್ರ ಶಂಕರ್ ಚಂದಮಾಮ

ಅಡಸಿ ಖಳ ನುಂಗಿದ ಭಟಾಳಿಗೆ|
ಕಡೆಯದಾವುದು ರಕ್ಕಸನ ಹ|
ಲ್ಲಡಿಯಲಜಿಗಿಜಿಯಾದ ಕಪಿಳಿಗಾವುದೋ
ಸೀಮೆ||
ಮಡವು ಮೊಳಕಾಲಂಘ್ರಿ ಮೊಳಕೈ|
ಮುಡುಹುಮುಷ್ಟಿಪ್ರಹರದಲಡ|
ಗೆಡೆದ ವಾನರಗಣದ ಗಣದ
ಗಣನೆಯನರಿವರಾರೆಂದ||
ಚಿತ್ರ ಶಂಕರ್ ಚಂದಮಾಮ



ಎಲವೊ ಕಪಿ ಕೇಳೀ ಮಹಾಯುಧ|
ದಲಗಿಗಳಿಯದೆ ಜೀವದಲಿ ನೀ|
ನುಳಿದುಹೋದರೆ ಮೂಗುಹೋದವನ್ನೈಸೆ
ತಾನೆನುತ|
ನಿಲುಕಿ ಲಾಗಿಸುತಿಟ್ಟನಿಟ್ಟೆಯ|
ಬಲುಗಿಡಿಯ ಕಟ್ಟೇರು ಕಿಬ್ಬದಿ|
ಯೊಳಗೆ ಗಬ್ಬರಿಸಿದವೊಲಿನ ಹಾಯೆನುತ
ಬಸವಳಿದ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ದಂಡೆಗೊಡ್ಡಿದ ಕರತಳವನು|
ದ್ದಂಡ ಸುರಗಿಯ ಮೋಹಳವ ಕೈ|
ಕೊಂಡ ಹಸ್ತವ ಕತ್ತರಿಸಿದುದು ಕಣೆ ಕೃತಾಂತಕನ||
ದಂಡಿಸರದ ವಸಂತದೋಕುಳಿ|
ಯಂಡೆಯೆನೆ ಮೋಟೆರಡರಲಿ ಹೊರ|
ವಂಡುವರುಣಜಲೌಘ ಹೊರೆದುದು
ದಿಕ್ತಟಾವಳಿಯ||
ಚಿತ್ರ ಶಂಕರ್ ಚಂದಮಾಮ



ತಿರಗಿತೀಬಲವಿತ್ತಲತ್ತಲು|
ಸರಿದರಳಿದುಳಿದಸುರರಿಕ್ಕಿತು|
ಪುರಕೆ ಮುತ್ತಿಗೆ ಮುಸುಕಿಕೊಂಡುದು ನಿಶಿ
ಮಹೀತಳವ||
ಇರಿಸಿ ಬಂದಿರೆ ನಿರ್ಜರ ಸ್ಮರ|
ಹರಣರುದ್ರನನಧಿಕ ಸತ್ಯೋ|
ತ್ಕರಸಮುದ್ರನನೆಂದು ಖಳ ತುಂಬಿದನು
ಕಂಬನಿಯ||
ಚಿತ್ರ ಶಂಕರ್ ಚಂದಮಾಮ



ಚಿಂತೆಯೇಕೆಲೆ ಜೀವ ಪೋದವ|
ರಂತಿರಲಿ ಪೊಸ ರಣರಸದಿ ನಿ|
ಮ್ಮಂತರಂಗದ ಶೋಕವಹ್ನಿಯ
ನಂದಿಸುವೆವೆನುತ||
ಅಂತರಹಿತ ಪರಾಕ್ರಮದ ದೇ|
ವಾಂತಕ ತ್ರಿಶಿರ ಪ್ರಸಿದ್ಧ ನ|
ರಾಂತಕ ಮಹೋದರನು
ಯುದ್ಧೋನ್ಮತ್ತರುಲುಕಿದರು||
ಚಿತ್ರ ಶಂಕರ್ ಚಂದಮಾಮ


ಏನಿದೆಚ್ಚರಿಕೆಯೊ ಸಮೀರನ|
ಸೂನುವಿನ ಸುಯ್ದಾನವೆಂತುಟೊ|
ಹಾನಿ ಹೊಗದಂತಿನತನೂಜಗೆ ಬಹ
ಮಹಾಯುಧವ||
ಆನೆಕಟ್ಟಿನ ಕೋಲ ಕರದಿಂ|
ದಾನುವಂತಿರೆ ಪುಟನೆಗೆದು ಹಿಡಿ|
ದಾ ನಿಶಾಟನನಿಡಲು ಹೂಣಿಸಿದನು
ಸರೋಷದಲಿ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಉಸುರಲಚ್ಚರಿ ಪವನಪುತ್ರನ|
ನಿಶಿತ ಖಂಡೆಯವಾ ನಿಶಾಟ|
ತ್ರಿಶಿರನುರದಲಿ ಬಿದ್ದುದಿಳಿದುದು ಕಲಿ
ಸುರಾಂತಕನ||
ವಸನಲಂಬಿತ ಕಟಿಯಲೇವ|
ಣ್ಣಿಸುವೆನ್ನೈ ನವಕುಂಭವನು ಭಾ|
ಗಿಸಿದ ಸೂತ್ರದ ಸೊಗಸು ಮೆರೆದುದು
ಕುಂಭಕಾರಕನ||
ಚಿತ್ರ, ಶಂಕರ್ ಚಂದಮಾಮ



ಹೊಗೆಯ ಹೊರಳಿಯನುಗಿದು ದಳ್ಳುರಿ|
ಧಗಿಸುವಂದದಲಿ ದುಃಖದ|
ದುಗುಡವನು ದೂಟಿಕ್ಕಿ ದಳ್ಳಿಸಿದಧಿಕ
ರೋಷಾಗ್ನಿ||
ಹಗೆಗೆ  ಜಯವಿಂದಿನಲಿ ಜಯಸಂ|
ಯುಗವು ತನಗಿಂದಿನಲಿ ರಣವನು|
ಹೊಗುವೆ ಹಳಚುವೆನೆನುತ
ವೀರಾವೇಶಮನನಾದ||
ಚಿತ್ರ ಶಂಕರ್ ಚಂದಮಾಮ


ಎಲವೊ ಕೇಳತಿಕಾ ಮತಿಗಳು|
ನಿಲುಕಲರಿಯವು ತುದಿಗೆ ನಿನ್ನಯ|
ನಿಲುಕಡೆಗಳವು ಬೇರೆ ಮಾರೀಚನ
ವಿಭೀಷಣನ||
ಬಳಿಯ ಕೈಕಸೆ ಮಾಲ್ಯವಂತರ|
ತಿಳುಹುಗಳ ತುದಿ ನಿನ್ನವೈಸಲೆ|
ಕಲಹಕಂಜುವಡತ್ ಸಾರ್ಕಾಳ್ಗೆಡೆಯಬೇಡೆಂದ||
ಚಿತ್ರ ಶಂಕರ್ ಚಂದಮಾಮ


ಈತನೀಗಲೆ ಜೀಯ ಬಾಹುಬ|
ಲಾತಿಶಯನಾಹವಕೆ ಹಾವಿನ|
ಲಾ ತಮಿಸ್ರಿಯಲೆಮ್ಮ ಬಲವನು ಬೆದರಿಸಿದ
ಭಟನ||
ಮಾತೆಗಿವ ಮಗನಿವನವನ ಸಹ|
ಜಾತನಿವನು ಕುಮಾರರಲಿ ವಿ|
ಖ್ಯಾತನಿವನತಿಕಾಯನೆಂಬುದು
ಹೆಸರಲೇಯೆಂದ||
ಚಿತ್ರ ಶಂಕರ್ ಚಂದಮಾಮ



ಬಂದ ಭರದೊಳಗಾತನೀತನ|
ನೆಂದನಳವಿಯೊಳುಬ್ಬರಿದು ರಘು|
ನಂದನನೊ ಲಕ್ಷ್ಮಣನೊ ನೀನಾರೆಂದು
ಸರಿಸದಲಿ||
ನಿಂದು ಕೇಳಲು ಕೇಳಿ ಲಕ್ಷ್ಮಣ|
ನೆಂದನೆಲವೋ ನಿನ್ನ ಮನಕೇ|
ನೆಂದು ತೋರಿತು ತೋರಿದನಿತನೆ
ಬಗೆದುಕೋಯೆಂದ||
ಚಿತ್ರ ಶಂಕರ್ ಚಂದಮಾಮ




ಬೊಬ್ಬಿರಿದ||

ಚಿತ್ರ ಶಂಕರ್ ಚಂದಮಾಮ



ಬಿಸರುಹಾಸನನಿಂದ ವರವವ|
ಗೊಸೆದುದಾಸುರಹೋಮದಲಿ ರಿಪು|
ವಿಕಸನ ಬ್ರಹ್ಮಾಸ್ತ್ರ ಸೇರುವುದಾ ನಿಶಾಟಂಗೆ||
ನಿಶಿಯೊಳದು ತಾ ಸಿದ್ಧವಾಗಿಹು|
ದಸುರವಿಪ್ರರ ಮುಖದಿನಾರಂ|
ಭಿಸಿದನಧ್ವರವನು
ಮಹಾಮಾರಣಮಖಾಹ್ವಯದ||
ಚಿತ್ರ ಶಂಕರ್ ಚಂದಮಾಮ



ಮುರಿದನವ ಪುರವರಕೆ ಪುರಹರ|
ಹರಿ ಯಮಾದಿಗಳಳುಕೆ ತಂದೆಯ|
ಭರದ ದುಗುಡವ ಬಿಡಿಸಿ ತೋರಿಪುದಕೆ
ಸರೋಜಜನ|
ವರದಲೊದಗಿದ ದಿವ್ಯರಥ ಹಯ|
ಶರ ಶರಾಸನಗಳನು ಹರುಷೋ|
ತ್ಕರ್ಝುಷವನು ಬಗೆಗೊಳಿಸಿ
ಬಳಿಕಿಂತೆಂದನಯ್ಯಂಗೆ||



ಅಸುರಪತಿ ಕೇಳ್ ನಿನ್ನ ಸೋಲದ|
ಸರಿಯ ಕಿತ್ತಿಕ್ಕವೆನು ರಾಮನ|
ಬಸುರಿನೊಳು ಬೆಳೆಸುವೆನು
ಲಕ್ಷ್ಮಣವರುಣವಾರಿಯಲಿ||
ಒಸೆದು ಸುಗ್ರೀವಾದಿ ವಿಪಿನೌ|
ಕಸರು ತತ್ಕುಜಫಲಗಳನು ಭುಂ|
ಜಿಸುವವೊಲು ಮಾಡುವೆನು ತಾ ವೀಳೆಯವ
ತನಗೆಂದ||

ಚಿತ್ರ ಶಂಕರ್ ಚಂದಮಾಮ


ಉರಿಯನುದರವ ಬಗಿಬಗಿದು ವಿ|
ಸ್ತರಿಸಿದನು ಕುಂಡದಲಿ ಮಾಂಸದ|
ಚರುವಿನರುಣಜಲಾಜ್ಯಧಾರೆಯ ನರದ
ದರ್ಭೆಗಳ||
ಬೆರಳ ಸಮಿಧೆಯಲಾಭಿಚಾರಾ|
ಧ್ವರವ ನಿರ್ವರ್ತಿಸಿದನೈ ನಡು|
ವಿರುಳು ನಿರ್ವಿಘ್ನದಲಿ
ವರವಾಯ್ತುಬುಜಸಂಭವನ||
ಚಿತ್ರ ಶಂಕರ್ ಚಂದಮಾಮ



ಕಟ್ಟಿದನು ಕಮಲಜಭವಾಸ್ತ್ರದ|
ಲಿಟ್ಟಣಿಸುವ ವಿಭೀಷಣನನೆ|
ಬ್ಬಟ್ಟಿದನು ಯಮಲೋಕಕಾತನ ಬಳಿಯ ಮಂತ್ರಿಗಳ||
ಮುಟ್ಟವಿಸಿದನು ಮತ್ತೆಯಸುರ ಘ|
ರಟ್ಟನಿದಿರಲಿ ಸುರರ ಗಮನದ|
ಬಟ್ಟೆಯಲಿ ಬಹುವಿಧದ ಮಾಯೆಯಲಿಂದ್ರಜಿತು ಬಳಿಕ||

ಚಿತ್ರ ಶಂಕರ್ ಚಂದಮಾಮ



ಚೂರಿಸುವ ನಿಡುನಾಲಗೆಯ ಫೂ|
ತ್ಕಾರರವದಕ್ಷಿಗಳಲುಬ್ಬುವ|
ತೋರಗಿಡಿಗಳ ದಾಡೆಗಳ ವಿಷದುರಿಯ
ಝಾಡಿಗಳ||
ಘೋರತರ ಪೆಡೆವಣಿಯ ನಿಶಿತ ಕ|
ಠೋರ ರಸುಮೆಯ ರೌದ್ರಸರ್ಪಾ|
ಕಾರಶರವಂಜಿಸಿತು ಗಾರುಡಭುವನರಂಜಕನ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಚಾರಿವರಿದಟ್ಟಿದವು ಹಾವುಗ|
ಳಾ ರಣಸಂಗಣ ಮಧ್ಯದಾಹವ|
ವೀರವರ್ಗವನಿಳೆಯೊಳೊರಗಿಸಿತೂದಿಕೆಯ
ವಿಷದ||
ಮಾರುತನ ಧಾಳಿಯಲಿ ಬಳಿಕಿಂ|
ದ್ವಾರಿ ಬೊಬ್ಬಿರಿದುಬ್ಬರಿಸಿ ತ|
ನ್ನೂರಿಗಭಿಮುಖನಾದನೊದರುವ
ವಾದ್ಯಘೋಷದಲಿ||
ಚಿತ್ರ ಶಂಕರ್ ಚಂದಮಾಮ



ಸೈರಿಸೊಂದೇ ಕ್ಷಣ ವಿಭೀಷಣ|
ವೀರಗಮನದೊಳರಸ ರಾಘವ|
ನಾರುಭಟೆಯನು ಲಕ್ಷ್ಮಣಾಂಕನ ಹೂಂಕೃತಿ
ಧ್ವನಿಯ||
ತೋರಿಸುವೆನೆನುತಾ ಸರಮೆ ನೃಪ|
ನಾರಿಯನು ನಳಿನಾಕ್ಷಿಯನು ನಯ|
ಸಾರದಲಿ ನಂಬಿಸುತ ತಂದಳು ಸೀಮೆಗಾ
ರಣದ||
ಚಿತ್ರ ಶಂಕರ್ ಚಂದಮಾಮ



ಗರಿಯ ಗಾಳಿಯ ಗವಲಿಗಸುಗಳ|
ತೊರೆದು ಸತ್ತವು ಕೆಲವು ನೆಲನನು|
ಕೊರೆದು ಹೊಕ್ಕವು ಕೆಲವು
ಕೆಲವಡಸಿರ್ದಬುಧಿಯಲಿ||
ಮುರಿಗಡೆದು ಕೆಲವೋಡಿದವು ಕೆಲ|
ವರಸಿದವು ಹುತ್ತಗಳ ದೃಷ್ಟಿಯ|
ಹರುಬಿನಲಿ ಸಿಕ್ಕಿದವು ಸೀಕರಿಯಾದವಗಲದಲಿ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ತೋರಿದವು ನಭದಲಿ ಶಿಖಾಳಿಗ|
ಳೇರಿದವು ಜೀಮೂತಸಂತತಿ|
ಚೀರಿದವು ಚಂಚಲತೆಯಲಿ ಸಿಡಿಲಿಳೆಗೆ
ಕೆಂಡಗಳ||
ಕಾರಿತಂಬರ ಹೊಗೆಯ ಹೊದರನು|
ಹೇರಿತಂಬರ ಭುವನ ಬೆದರಲು|
ಚೀರಿತಂಬರ ಬೀರಿತಂಬರವಖಿಳ ಭಯರಸವ||



ಸುರಿವುದೊಮ್ಮೊಮ್ಮರುಣಜಲ ಹೆ|
ಬ್ಬುರಿ ಛಡಾಲಿಸಿ ಹೊಯ್ದುದ್ರಿಗ|
ಳುರುಳಿದವು ಸಿಡಿಲೆರಗಿದವು ತುರುಗಿದವು
ತಿಮಿರಚಯ||
ಶರಧಿ ಜರಿವುದು ಕಾರಮಳೆ ಭೋ|
ರ್ಗರೆದು ಸುರಿವುದು ಕಾಳರಕ್ಕಸ|
ನೆರವಿ ನೆರವಿಕೆಗಳಲಿ ನಿಲುವುದು ಮಾಯೆಯಲಿ
ಖಳನ||

ಚಿತ್ರ ಶಂಕರ್ ಚಂದಮಾಮ


ಹವಣಿಸಿದರಾಯೆಡೆಯಲತಿ ಖೇ|
ದವನು ಕವಿಗೊಟ್ಟೊಯ್ಯನೊಯ್ಯನೆ|
ತವಕಿಸದೆ ತಡೆತಡೆದು ತೋರುವ
ದನಿಯನಾಲಿಸುತ||
ಇವರು ಬರೆಬರೆ ರಾಮಕವಚ|
ಸ್ತವದ ರಾಮಧ್ಯಾನಪರ ಜಾಂ|
ಬವನ ಜಗದಧಿಜನಕ ತನುಜನ
ಕಂಡರಿದಿರಿನಲಿ||

ಚಿತ್ರ ಶಂಕರ್ ಚಂದಮಾಮ



ಸಾಯದೆ ಮಾಣಂ ಲಕ್ಷ್ಮಣ|
ನೀಯಿರುಳೊಳೆ ಸಾಯೆ ಸೆರೆಗಳಂ ಕೊಲ್ಲದೆ ಕೈ||
ಗಾರಯರವರೆಮಗೆ ಪಿರಿದುಮ|
ಪಾಯಂ ಸಮನಿಸಿದುದೆಂದು ಚಿಂತಿಸುತಿರ್ದಂ||
ಚಿತ್ರ ಶಂಕರ್ ಚಂದಮಾಮ



ಉದಯವೆರಡೇ ಘಳಿಗೆಯಿದೆ ನೀ|
ನಿದರೊಳಗೆ ಬರಬೇಡ ಪಶ್ಚಿಮ|
ದುದಧಿಗಿನ ಸಾರಿದರೆ ಸಾರುವುದಿರಳು
ನಮ್ಮುವನು||
ಪದುಳದಿಂ ತಹುದೆನಲು ಪದಕೆರ|
ಗಿದ ಕಪೀಂದ್ರನ ಹರಸಿ ಹರುಷದ|
ಹೊದರ ಹೊಂಗಿನಲೊಲಿದು ಕಳುಹಿದನಾ
ಸ್ವಯಂಭುಸುತ||ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಐಸಲೇ ಬೆರಗೇಕೆ ಕೀಳುವೆ|
ನೀ ಶಿಲೋಚ್ಚಯವನು ಸರೋಜ ಮ|
ಹಾಸನನ
ಸುತನರಸಿಕೊಳಲೌಷಧಿಯನಿದರೊಳಗೆ||
ಓಸರಿಸಲೇಕೆನುತ ಭುಜ|
ಪಾಶದಲಿ ಪರ್ವತವ ಬಿಗಿದಾ|
ಕಾಶಕೆತ್ತಿದನೊದರಲಂಬರವದುರಲವನಿತಳ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಧರಿಸಿ ಗಿರಿಯನು ಹೋದ ಪಥದಲಿ|
ತಿರುಗಿದನು ನಿಶಿಯಲಿ ನಿಶಾಕರ|
ನಿರವಿನವೊಲೊಪ್ಪಿದುದು ತದ್ಗಿರಿ
ಕರದೊಳನಿಲಜನ||
ಚಿತ್ರ ಶಂಕರ್ ಚಂದಮಾಮ




ನಮಗಿಲ್ಲಲೇಯೆಂದ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕುಂಭನೊಂದೆಸೆಯಲಿ ರಣೋಗ್ರನಿ|
ಕುಂಭನೊಂದೆಸೆಯಲಿ ಮಹಾಗ್ನಿ|
ಸ್ತಂಭನೆಯ ಖಳರೊಗ್ಗಿನಲಿ ತಗ್ಗಿಸಿದರಿವರಧಟ||
ಜಂಭರಿಪುಜಿತು ಬೆರಗುಗೊಂಡು ನಿ|
ಕುಂಭಿಳೆಯ ಸಮ್ಮುಖ ಮುಖಸ್ವಾ|
ಯಂಭುಶರ ಕನಸಾಯ್ತೆನುತ
ಹೊರವಂಟನರಮನೆಯ||

ಚಿತ್ರ ಶಂಕರ್ ಚಂದಮಾಮ



ಎಷ್ಟು ಸಾಹಸಗೊಂಡಡೆಯು ನಿ|
ಮ್ಮಿಷ್ಟ ಕೈವಶವಾಗದಿದು ಪರ|
ಮೇಷ್ಟಿಲಿಖಿತ ತದೀಯ ಲಿಖಿತವ
ಮೀರಲಾರಳವು||
ಭ್ರಷ್ಟತನದಲಿ ನಡೆದು ಲೋಕಕೆ|
ಕಷ್ಟರಾದಿರಲಾಯೆನುತ ಬಲು|
ಮುಷ್ಟಿಯನು ಬಲಿದೆರಗಿದನು ಕಲಿಕುಂಭನನು
ರವಿಜ||
ಚಿತ್ರ ಶಂಕರ್ ಚಂದಮಾಮ

ಎಲವೊ ಸಾರಥಿ ಕೇಳು ರಾಮನ|
ಬಳಿಗೆ ಬಿಡು ನಿಜರಥವ ಬಲಿಮುಖ|
ಬಲದೊಳಗೆ ಬಳಿಸಲಿಸದಿರು
ಬಿಲುದುಡುಕೆನಿವದಿರಿಗೆ||
ಕಲಹ ರಾಮನ ಕೂಡೆ ಗೆಲವಿನ|
ಬಲುಹು ರಾಮನ ಕೂಡೆ ತಂದೆಯ|
ಕೊಲೆಗೆ ಕೊಲೆಯದು ಕೊಳದಿರಲು
ಮಕರಾಕ್ಷನಲ್ಲೆಂದ||
ಚಿತ್ರ ಶಂಕರ್ ಚಂದಮಾಮ

ಮರೆಮರೆಯಲವನಿಂದ್ರ ವಾರುಣ|
ಹರಸಖಾನಲ ವಹ್ನಿ ಪಿತೃಪತಿ|
ನಿರುತಿ ನೀರಜಭವಭವಾಸ್ತ್ರಂಗಳಲಿ
ಮಾರುತಿಯ||
ಸರಿಸದಲಿ ಸೈಗರೆದು ಗೆಲವಿನ|.ಪರಿಯ ಕಾಣದೆ
ಪಾಡಳಿದು ಪೈ|
ಸರಿಸಿ ಮಾಯಾಸೀತೆಯನು ನಿಮಿಷದಲಿ
ನಿರ್ಮಿಸಿದ||

ಚಿತ್ರ ಶಂಕರ್ ಚಂದಮಾಮ



ಕಂಡನಾ ಹನುಮಂತ ವನದಲಿ|
ಕಂಡ ಸೀತೆಯ ರೂಪಿನಬಲೆಯ|
ಖಂಡೆಯದ ಬಾಯ್ದಾರೆಗೌಕಿದ ಕೊರಳ
ಕಳಕಳದ||
ಚಂಡಿಸಿದ ಕೋಪಾಗ್ನಿ ಬಳಿಕು|
ದ್ದಂಡ ಹನುಮಂಗೆದ್ದುದುದರದ|
ಗುಂಡಿಗೆಯ ಘನಶೋಕರಸ ಕುದಿದುಕ್ಕೆ
ನಯನದಲಿ||
ಚಿತ್ರ ಶಂಕರ್ ಚಂದಮಾಮ



ಮುಡಿವಿಡಿದು ಕರವಾಳತಟ್ಟಿನ|
ಲಡಿಗಡಿಗೆ ಹೊಯ್ ಹೊಯ್ದು ಕುಬುಬಿರಿ|
ದೆಡಬಲಕೆ ಬರಸೆಳೆದು
ಬೆದರಿಸುತಳಿಸುತೊದರಿಸುತ||
ಖಡುಗವನು ಮಗುಳೆತ್ತಿ ಝಳಪಿಸಿ|
ಹೊಡೆಯಲನುಗೈದನಿಲಜನ ಕಂ|
ಗೆಡಿಸಿದನು ಕಡುಹೇರೆ ಖಳ
ಮಾಯಾವಿಕಾರದಲಿ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ


ನೋಡು ನೋಡೆಲೆ ಹನುಮ ಸೀತೆಯ|
ನೋಡು ಕಂಡಾ ಕಾಣೆನೆನ್ನದೆ|
ನೋಡೆನುತ ಬೊಬ್ಬಿರಿದು ರಥದಗ್ರದಲಿ
ಖಂಡೆಯವ||
ನೀಡಿ ಝುಳಪಿಸೆ ಹಾ ಸಮೀರಜ|
ಕೇಡ ಕಂಡೈಯೆಂದ ಮಾಯೆಯ|
ಜೋಡಣೆಯ ಜಾನಕಿಯ ಕಡಿದಿಳುಹಿದನು
ಧರಣಿಯಲಿ|
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕಡಿದು ಬೀಳದ ಮುನ್ನ ಕೋಪದ|
ಕಿಡಿಸಹಿತ ಪುಟನೆಗೆದು ತಿವಿದನು|
ಝುಡಿತೆಯಲಿ ಜಜ್ಝರಿತವಾಗಲು ತೇರು
ರಾವಣಿಯ||
ಅಡಗಿದನು ಬಳಿಕವನು ಮಾಯೆಯ|
ನಡಪನೊಡ್ಡಿ ಸಮೀರಸುತ ಕಡು|
ಹಡಗಿ ಮುರಿದನು ಬಳಿಕ
ಮಾಯಾಸೀತೆಯಿದ್ದೆಡೆಗೆ||
ಚಿತ್ರ ಶಂಕರ್ ಚಂದಮಾಮ


ಬಳಿಕ ಮಾಯಾರೂಪಕದ ಮೈ|
ಥಿಳೆಯ ಖಂಡಿತ ತನುವೆರಡ ತಂ|
ದಿಳುಹಿದನು ಮಾಯಾ ನರೇಂದ್ರನ ಬಳಿಯಲಾ
ಹನುಮ||
ಎಲೆ ಹನುಮ ಕೇಳೆಮ್ಮ ಹುಯ್ಯಲ|
ಕೆಲಸವೇ ತಾನಿದುವೆಯೆಂದಳ|
ವಳಿದು ಮೆಲ್ಲನೆ ಮಹಿಗೆ ಮೈಯಿಕ್ಕಿದನು
ಮೂರ್ಛೆಯಲಿ||
ಚಿತ್ರ ಶಂಕರ್ ಚಂದಮಾಮ



ಇದು ಕಣಾ ಮಾಯಾವಿಗಳು ಮಾ|
ಡಿದ ಮಹಾ ಶಾಂಬರದ ಕೆಲಸದ|
ಸುದತಿ ಸುಳಿದರೆ ಬಲ್ಲೆವಾವ್ ನಮ್ಮವರ
ಮಾಯೆಗಳ||
ಇದಕೆ ಚಿಂತಿಸಬೇಡ ಮೇಲಣ|
ಹದಕೆ ಕಾರ್ಯವ ನೆನೆವುದೇ ತಾ|
ವಿದಿತ ವಿಪ್ರಾಲಾಪವಿದು ತಾ ವ್ಯರ್ಥ ನಿಮಗೆಂದ||
ಚಿತ್ರ ಶಂಕರ್ ಚಂದಮಾಮ



ಸಚಳನಲ್ಲಾ ಹನುಮ ಶರಣನ|
ಸಚಿವ ಸಹ ನಡೆತಂದನಿಂದ್ರಿಯ|
ಶುಚಿಯಶೋಕಾವನದಿ ಕಂಡನು
ಲೋಕಪಾವನೆಯ||
ಪ್ರಚುರ ಪುಣ್ಯಾಂಗನೆಯ ಜಯಜಯ|
ವಚನದಲಿ ಕೈಮುಗಿದು ತಿರಗಿದ|
ನಚಲ ಧೀರೋದಾತ್ತನೆಡೆಗಪರಾಹ್ಣ
ಸಮಯದಲಿ||
ಚಿತ್ರ ಶಂಕರ್ ಚಂದಮಾಮ



ಆರಿ ಬೊಬ್ಬಿರಿದಸುರಪತಿ ರಣ|
ಭಾರದಲಿ ನಡೆಗೊಂಡು ತೆಗೆದನು|
ದಾರಿಯನು ಸೌಮಿತ್ರಿ ಬರುವಾಸುರ
ಚತುರ್ಬಲವ||
ಸೇರಿಸಿದನಂಬಿನಲಿ ಹಿಂದೆ ಸ|
ಮೀರಸುತನೌಕುವ ನಿಶಾಟರ|
ತೀರಬಡಿದನು ಹೊಕ್ಕರೀ ಮೂವರು
ಮಖಾಲಯವ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಎದ್ದನವ ಕೆದರಿದ ಬಣಂಬೆಯೊ|
ಳೆದ್ದ ಕಾಳ್ಗಿಚ್ಚಿನವೊಲುರೆ ಹೊದ|
ರೆದ್ದ ಕಂಗಳ ಕಿಡಿಯ ನಾಸಾಪುಟದ
ಕಬ್ಬೊಗೆಯ||
ಎದ್ದು ರೋಷದಿ ಮೂರುಲೋಕವ|
ನುದ್ದಿ ನುಂಗುವ ಹರನ ಖತಿಯನು|
ಕದ್ದನೆನೆ ಕಾಲಿಕ್ಕಿದನು ನಿಜರಥದೊಳಿಂದ್ರಜಿತು||
ಚಿತ್ರ ಶಂಕರ್ ಚಂದಮಾಮ



ಆವ ಪರಿಯಲಿ ಹೊಕ್ಕನಿವನೆಂ|
ಬೀ ವಿಚಾರವನರಿಯದಾದಿರಿ|
ದೇವನಿವ ವಿಶ್ವಾಸಘಾತಕ ಕುಟಿಲಕುಹಕರಿಗೆ||
ಹಾವುಮೆಕ್ಕೆಯ ಹಣ್ಣಿನಂದದ|
ಜೀವಿಯಿವ ಮಿತ್ರತ್ವ ಹದ್ದಿಗೆ|
ಹಾವಿಗುಂಟೇ ತುದಿಗೆ ನಿಮ್ಮಯ ವಿಧಿಯ
ನೋಡೆಂದ||
ಚಿತ್ರ ಶಂಕರ್ ಚಂದಮಾಮ



ಎಲವೊ ರಾವಣಿ ಕೇಳು ರಾಕ್ಷಸ|
ಕುಲದ ತಲೆ ಚಂಡಾಡುವಂಬಿನ|
ಬಲುಹ ಕಂಡಾ ಕೊಲ್ಲೆನಂಜದಿರೇಳು
ಹೊಸರಥವ||
ಬಿಲುದುಡುಕು ಬಾಣಗಳ ಕರೆ ಕೈ|
ಲುಳಿಯ ನೋಡುವ ಬಳಿಕೆನುತ ಬಗೆ|
ಗಳಚಲೆಚ್ಚನು ಕೊರಳುಗಳ ತೇಜಿಗಳ
ಸಾರಥಿಯ||
ಚಿತ್ರ ಶಂಕರ್ ಚಂದಮಾಮ



ನೂಕಿ ಹಾಯ್ದವು ಲಕ್ಷ್ಮಣನ ಸರ|
ಳೋಕರಿಸುತರುಣಾಂಬುವನು ಜಿತ|
ಪಾಕಶಾಸನನುರವ ಬಗಿದಾರೇಳು ಯೋಜನವ||
ಸೋಕಿದಾಜ್ಯಾಹುತಿಯ ಶಿಖಿಯು|
ದ್ರೇಕದವೊಲಿಂದ್ರಾರಿ ಕೋಪದೊ|
ಳೀ ಕಕುತ್ಸ್ಥಾನ್ವಯನ ತಮ್ಮನೆಚ್ಚು ಬೊಬ್ಬಿರಿದ||

ಚಿತ್ರ, ಶಂಕರ್ ಚಂದಮಾಮ



ಅಬ್ಬರಿಸಿ ಬರೆ ಸರಳು ನಭದಲಿ|
ಬೊಬ್ಬಿರಿದುದಮರಾಳಿ ಹೊಡೆದವು|
ಹೆಬ್ಬರಗಳಲ್ಲಲ್ಲಿ ಮಾತಲಿ ಭುಜವನೊಡರಿಸಿದ||
ಉಬ್ಬಗೆಡೆದಿಂದ್ರಾರಿ ಕೈಯಿಂ|
ದೆಬ್ಬಿಸಿದ ಶಕ್ತಿಯನು ಖಂಡಿಸು|
ತುಬ್ಬಿನಲಿ ನಡೆತಂದು ನೆಗಹಿತುನಭಕೆ
ರಿಪುಶಿರವ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಸತಿಯ ಪುತ್ರ ವಿಲಾಪದಭ್ರ|
ಪ್ರತತಿಯಬ್ಬರಕುಬ್ಬಿದುದು ಖಳ|
ಪತಿಯ ಕರಣಾವಳಿಯನೊದೆದುರೆ
ಶೋಕರಸಜಲಧಿ||
ಖತಿಯ ಹಿಡಿದವ ಬಳಿಕಲಾ ರಘು|
ಪತಿಯ ಪುಣ್ಯ ಸ್ತ್ರೀಯ ಕೊಲುವಾ|
ಯತದಲ್ಲೈದಿದನವನು ಬನವನು
ಜನಕನಂದನೆಯ||
ಚಿತ್ರ ಶಂಕರ್ ಚಂದಮಾಮ



ಕೀರ್ತಿಯಹುದರಿಭಟನ ಸಮರೊ|
ಳಾರ್ತರಲಿ ಕಾದಿದರೆ ಸೇರದು|
ಧೂರ್ತ ಜನ ನಗದಿಹುದೆ
ರಾವಣನಧಿಕಬಲನೆಂದು||
ವಾರ್ತೆ ಮುಂದಣ ಯುಗಗಳಲಿ ಸಂ|
ಪೂರ್ತಿಯಹುದದರಿಂದ ನೀನಪ|
ಕೀರ್ತಿಯನು ಕೈವಿಡಿಯದಾಜಿಗೆ ಮನವ
ಮಾಡೆಂದ||

ಚಿತ್ರ ಶಂಕರ್ ಚಂದಮಾಮ

ಹಬ್ಬಿದುದು ಸುತಶೋಕಶಿಖಿ ಮುರಿ|
ಬ್ಬರಿಸಿದುದು ರೋಷಪಾವಕ|
ನುಬ್ಬಟೆಯ ಬಾಹುಪ್ರತಾಪಾನಲನ ನಾಲಗೆಯ||
ಅಬ್ಬರಿ ಕಿಚ್ಚೊಂದು ಹುರಿಗೊಂ|
ಬ್ಬಿಸಿದುದುದ್ರೇಕವನು ಜಗ|
ದೊಬ್ಬ ವೀರನು ನೂಕಿದನು ಬಳಿಕವರ
ಮೋಹರಕೆ||
ಚಿತ್ರ ಶಂಕರ್ ಚಂದಮಾಮ



ಕುಶನೆ ಕೇಳ್ಳೈದನೆಯ ದಿನ ಬಾ|
ರಿಸಿತು ಬಿಂಕದ ಬವರ ಕಿಡಿಕಿಡಿ|
ಮಸಗೆ ಕಣೆಕಣೆಗಳಲಿ ನೆರೆ ಕೀಲಿಸಿದರಂಬರವ||
ವಿಶಿಖ ವಿಹರಣದುಬ್ಬರಕೆ ದಿಗು|
ವಿಸರ ಹೊಗೆದವು ಹರಿಹಯಾದಿಗ|
ಳುಸುರುಪಥ ಪಲ್ಲಟಿಸೆ ನಿಂದವು ಲವನೆ ಕೇಳೆಂದ||

ಚಿತ್ರ ಶಂಕರ್ ಚಂದಮಾಮ


ಏನೆಲವೊ ದುಮ್ಮಾನ ರಣಸು|
ಮ್ಮಾನವೆಲ್ಲಿಗೆ ಹೋಯ್ತು ಶರಸಂ|
ಧಾನವೆಮ್ಮದು ಕೊರಳಕೊಟ್ಟಾ ನಮ್ಮ
ಮಾರ್ಗಣಕೆ||
ಮಾನಸದೊಳಂಜದಿರು ಶಸ್ತ್ರವಿ|ಹೀನನು
ವಿರಥನನು ರಘುಕುಲ|
ಮಾನನಿಧಿಗಳು ಕೊಲ್ಲರಂಜಿಕೆಬೇಡ ನಿನಗೆಂದ||
ಚಿತ್ರ ಶಂಕರ್ ಚಂದಮಾಮ



ತುಳಿದನನಿತರೊಳನಿಲಸುತ ಹೊಳ|
ಹೊಳಕಿ ರೂಪಾದಸುರಕೋಟಿಯ|
ನುಳುಹದಾ
ಮಹದಗ್ನಿಕುಂಡದೊಳಿಂದ್ರಸುತಸೂನು||
ಖಳಶಿರೋಮಣಿಯಂಗನೆಯ ಮುಂ|
ದಲೆಯ ಹಿಡಿದೆಳೆದುಟ್ಟ ಸೀರೆಯ|
ಸೆಳೆಯಲೊದರಿದಳಬಲೆ
ಹಾಹಾರವದಲಸುರಂಗೆ||
ಚಿತ್ರ ಶಂಕರ್ ಚಂದಮಾಮ



ಕೇಳೆಲವೊ ದಶಮುಖ ವಿಕರ್ಮದ|
ಬೇಳುವೆಯ ಬೇಳಂಬ ಬೂದಿಯೊ|
ಳಳುವುದು ಕಕ್ಕುಲಿತೆ ಸಾಕಿನ್ನೇಕೆ ಜಯಮುಖದ||
ಕಾಳಗದೊಳಣು ಚರಿಸದೊದಗಿದ|
ಡೇಳುವುದು ಕಡಿದುಡಿದ ಕೀರ್ತಿ ಲ|
ತಾಳಿ ಕವಲೊಡೆದಜನ ಲಯತನಕೆಂದನಾ
ಹನುಮ||
ಚಿತ್ರ ಶಂಕರ್ ಚಂದಮಾಮ


ತೊಲಗಗಡಿದನು ಹತ್ತು ಬಿಲುಗಳ|
ನಿಳಿಯಲೆಚ್ಚನು ಹತ್ತು ಮಕುಟವ|
ತಲೆಗೆ ತೊಟ್ಟೀ ಮಾತನೆಂದನು
ಮಧುರವಚನದಲಿ||
ಎಲೆ ದಶಾನನ ಕೇಳು ರಾಮಂ|
ಗೊಲುಮೆ ಘನ ನಿನ್ನವನ ಮೇಲಾ|
ಬಳಿಯಲನುಸರಿಸುವುದು ಚಿತ್ತಕೆ
ತೋರುತಿದೆಯೆಂದ||
ಚಿತ್ರ ಶಂಕರ್ ಚಂದಮಾಮ



ದೇವ ಬಿನ್ನಹ ಸಕಲ ದೇವರ|
ದೇವನಿರವನು ನೋಡು ಪದ ರಾ|
ಜೀವವೇ ಸಂಚರಿಸುತಿವೆ ರವಕುಳದ
ಮಧ್ಯದಲಿ||
ರಾವಣನ ನೋಡುರು ವರೂಥ ಸ|
ರಾವ ಸಮರಪ್ರೌಢಿಯನು ನಿಮ|
ಗಾವುದುಚಿತಪ್ರೀಯವೀ
ರುತಿಗೆಂದುದಮರಗಣ||
ಚಿತ್ರ ಶಂಕರ್ ಚಂದಮಾಮ



ಕೇಳಿದನು ಬಳಿಕಿಂದ್ರನೊಯ್ಯನೆ|
ಮೌಳಿಯನು ಮಣಿದಬುಜಸಂಭವ|
ಶೂಲಿಗಳಿಗವರನುಮತಾನುಜ್ಞೆಯಲಿವನಿಜರಥ
ವ||
ಮೇಳವಿಸಿ ಮಾತಳಿಯ ಕರೆದು ನೃ|
ಪಾಲಚೂಡಾಮಣಿಗೆ ರಣಜಯ|
ಶೀಲ ಶೂರಾಗ್ರಣಿಗೆ ಸಾರಥಿಯಾಗು ನೀನೆಂದ||
ಚಿತ್ರ ಶಂಕರ್ ಚಂದಮಾಮ



ಖುರಕೆ ನಮಿಸಿ ರಘುಕ್ಷಿತೀಶನ|
ಚರಣಕಾನತನಾಗಿ ರಥಕು|
ಪ್ಪರಿಸಿ ವಾಘೆಯ ಕೊಂಡು ಹಯಕಂಧರವ
ಬೋಳೈಸಿ||ಅರಿಯ ಸೂತನ ಮೂದಲಿಸಿ ಚ|
ಪ್ಪರಿಸಿದನು ವಾಜಿಗಳ ಮಾತಳಿ|
ಸುರರು ಕುಸುಮಾಂಜಲಿಗೆದರೆ ಕೆದರಿದವು
ಹಯನಿಕರ||
ಚಿತ್ರ, ಶಂಕರ್ ಚಂದಮಾಮ

ವೀರ ಕೇಳ್ಳೆ ಬಳಿಕ ರಾವಣ|
ವೀರ ಬೊಬ್ಬಿರಿದೆಚ್ಚನಾ ರಘು|
ವೀರನನು ವೀರರಿಗೆ ವೀರನಲಾ ರಘುಪ್ರಭವ||
ತೀರಿದವು ಹದಿನೇಳು ದಿನ ಜ|
ಜ್ಝಾರ ನಡೆದುದು ಬಿಡದೆ ಕತ್ತಲೆ|
ತೀರಿತಾ ದಿನಮಣಿಯ ಜನನದೊಳೊಡನೆ
ಮರುದಿವಸ||
ಚಿತ್ರ ಶಂಕರ್ ಚಂದಮಾಮ



ಮನದಿ ಹರಿ ಬ್ರಹ್ಮೇಶ್ವರರ ನೆನೆ|
ದಿನಿತು ಪ್ರಾಣಾತ್ಮಕನ ಭಾವಿಸು|
ಗುಣಮಹಿಮ ತ್ರಿಗುಣಾತ್ಮಕನ
ತ್ರೈಲೋಕ್ಯಪಾಲಕನ||
ಘನಮಹಿಮ ಕಾಲಗ್ನಿರೂಪನ|
ಚಿನುಮಯನ ಶ್ರೀ ಸೂರ್ಯನಾರಾ|
ಯಣನ ಸತ್ಕವಚವಿದು ಶುದ್ಧದೊಳನುಕರಿಸು
ದೃಢದಿ||
ಚಿತ್ರ ಶಂಕರ್ ಚಂದಮಾಮ



ಇಳೆಗೆ ರಥದಿಂದಿಳಿದ ರಘುಕುಲ|
ತಿಲಕನನು ಕಾಣುತ್ತ ದಿವದಿಂ|
ದಿಳಿದನಾ ಸಮಯದಲಿ
ಸರಸಿಜಭವನನುಜ್ಞೆಯಲಿ||
ಕಳಶಭವನಾ ಮನುಕುಲೇಂದ್ರನ|
ಬಳಿಗೆ ನರನಾಟಕದ ನಟಣೆಯ|
ಕೆಲಸ ಕರ ಲೇಸಾಯಿತೆಂದನು ಮಂದಹಾಸದಲಿ||
ಚಿತ್ರ ಶಂಕರ್ ಚಂದಮಾಮ



ಸಾಕು ಮಾತಳಿ ಮಾತು ನಾವು ಸ|
ಮೀಕಬಾಹಿರರರಿಶಿರಂಗಳ|
ನೂಕಿ ಬೇಸತ್ತವು ಶರಂಗಳು
ಸೋಲವೆಮಗಾಯ್ತು||
ಓಕರಿಸಿದಳು ಮೃತ್ಯುವೀ|
ಲೋಕೈಕವೀರನ ನಮಗೆ ತಾನಿ|
ನ್ನೇಕೆ ಜಯದಭಿಲಾಷೆ ತಿರುಗಿಸು ತೇರ
ಕೆಲಕೆಂದ||



ರಾಯ ರಾಯರ ರಾಯ ರಾಘವ|
ರಾಯ ರಣರಂಗದಲಿ ರಕ್ಕಸ|
ರಾಯನನು ಗೆಲಿದೊಲಿಸಿ ಸಲಹಿದನಖಿಳ
ಭುವನಗಳ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಕುಲಕೆ ಕಂಟಕನಾದೆನವನೀ|
ತಳಕೆ ಭಾರಕನಾದೆ ನರಕದ|
ಕುಳಿಗೆ ನಾಯಕನಾದೆ ಜಗದ ಜನಾಪವಾದಕದ|
ಜ್ವಲನಕಧಿಕೃತನಾದೆ ಹೊತ್ತೆನು|
ಜಲಜಸಂಭವ ಕಲ್ಪ ಒರಿಯಂ|
ತಲಸದಪಕೀರ್ತಿಯನು ಗತಿಯೆನಗೇನು
ಹೇಳೆಂದ||
ಚಿತ್ರ ಶಂಕರ್ ಚಂದಮಾಮ


ಝಣರವದ ನೂಪುರದ ಮಣಿಕಂ|
ಕಣದ ಹಾರದ ಕದಪನಣೆವಾ|
ಮಣಿಯ ಮುತ್ತಿನ ತಿಲಕ ಬೈತಲೆಗಳ
ವಿಲಾಸಗಳ||
ಕುಣಿಕೆಗಳ ಮುರಿದಿಡುತ ವೀರರ|
ಕಣಿಯೆ ಹಾ ಸೌಭಾಗ್ಯ ಚೂಡಾ|
ಮಣಿಯೆ
ಹಾಯೆಂದೊದರುತ್ತೈದಿದರಾತ್ಮವಲ್ಲಭನ||
Scanned by CamScanner

ಚಿತ್ರ ಶಂಕರ್ ಚಂದಮಾಮ



ಮರುಳುತನ ನಿನಗುಂಟೆ ಕೇಳ್ಳೈ|
ವರವಿಭೀಷಣದೇವ ಜನನಕೆ|
ಮರಣ ನಿಜಸೌಖ್ಯಕ್ಕೆ ದುಃಖವಿದೀಗಲನುಸಾರಿ||
ತರುಣತನ ವಾರ್ಧಿಕಕೆ ಮಹದೈ|
ಶ್ವರ್ಯ ವಿಪದಾಶ್ರಯಕೆ ನೀನಿದ|
ಕರುಹನಾಗರಿವಿಂಗೆನುತ ಸಂತೈಸಿದನು ರಾಮ||
ಚಿತ್ರ ಶಂಕರ್ ಚಂದಮಾಮ



ಹಿತ್ತಿಸಿದರಗ್ನಿಯನು ಬಳಿಕೆಂ|
ಬತ್ತು ಯೋಜನದಗಲದಿಳೆಯಲಿ|
ಸತ್ತ ಸುಭಟರ ಮೇಲೆ ತಳಿಗಳನೊಟ್ಟಿ ನೀರಸದ||
ಇತ್ತರುದಕಾಂಜಲಿಯನನಿಬರ|
ಪುತ್ರಮಿತ್ರಜ್ಞಾತಿಗಳು ಸ|
ದ್ವೃತ್ತ ವೀರ ವಿಭೀಷಣಾಸುರನೊಡನೆ
ಬಳಿಕೆಂದ||
ಚಿತ್ರ ಶಂಕರ್ ಚಂದಮಾಮ



ಬಳಿಕ ಮಂಗಳವಾದ್ಯ ರಭಸದ|
ಲಿಳೆಯ ವಿಬುಧರ ನಿಗಮಮಂತ್ರದ|
ಕಳಕಳದಲಿನಸುತ ಸುಮಿತ್ರಾತ್ಮಜರ
ಹರಕೆಯಲಿ||
ಸುಲಭವಾದುದು ಪಟ್ಟ ಕಂಡುದು |
ಹೊಳಲಜನ ಪರಿಜನ ಸುಹೃಜ್ಜನ|
ನಳಿನನಯನಾರಾಧಕನನಾ ವರ ವಿಭೀಣನ||
ಚಿತ್ರ ಶಂಕರ್ ಚಂದಮಾಮ



ತರಿಸಿ ಮಣಿಮಡಿವರ್ಗದಲಿ ಕು|
ಳ್ಳಿರಿಸಿ ಪರಿಮಳ ತೈಲದಲಿ ನೇ|
ವರಿಸಿದರು ಸಿರಿಮುಡಿಯ ಮಜ್ಜನವಾಯ್ತು
ಮಂಗಲದ||
ಸುರುಚಿರಾಂಬರ ಗಂಧಮಾಲ್ಯಾ|
ಭರಣದಿಂದೊಪ್ಪಿದಳು ಪೂರ್ವದ|
ಸಿರಿಯ ಸಡಗರದಲಿ ಸರಾಗದೊಳಾ
ಸರೋಜಮುಖಿ||
ಚಿತ್ರ ಶಂಕರ್ ಚಂದಮಾಮ



ಅಂಜುವೆವು ನಾವ್ ನಿಮಗೆ ನಿಮ್ಮಭಿ|
ರಂಜಕವ ನಾ ಬಲ್ಲೆನೀ ಸತಿ|
ಯಂಜುವಡೆ ಬಿಡಲಂಜದಿರ್ದಡೆ ಹೊಗಲಿ
ಹುತವಹನ||
ಕಂಜಭವಭವ ಮುಖ್ಯ ಸಕಲ ಸ|
ಮಂಜಸರು ಕೂಗಿದರೆ ಸರಿ ಮರ|
ಳೆಂಜಲಿನ ಮಾತಿಲ್ಲ ನಮಗೆಂದರಸ ನೇಮಿಸಿದ||

ಚಿತ್ರ ಶಂಕರ್ ಚಂದಮಾಮ



ಬಳಿಕ ಕೈಮುಗಿದೆಂದಳರಸಂ|
ಗೆಲೆ ನೃಪೋತ್ತಮ ನಿನ್ನ ಸಿರಿಪದ|
ನಳಿನವಲ್ಲದೆ ಬಲ್ಲೊಡೊಳಕೊಳಲಗ್ನಿ
ನಿಜತನುವ||




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಚ್ಚರಿತಮಾರ್ಗಕೆ ಲಕ್ಷ್ಮಣನ ಶುಶ್ರೂಷೆಗಾನೆಂದ||

ಚಿತ್ರ ಶಂಕರ್ ಚಂದಮಾಮ



ಇಳಿದು ವೃಷಭನನಖಿಳ ನಿಗಮಾ|
ವಳಿ ಶಿರೋಮಣಿ ಶೀತಕರ ಸ|
ಲ್ಲಲಿತ ಮಸ್ತಕಮಣಿ ನಭೋಮಣಿ ಕೋಟಿ
ಸಂಕಾಶ||
ಜಲಜಸಂಭವಮುಖ್ಯ ದಿವಿಜಾ|
ವಳಿಶಿಖಾಮಣಿ ಜನನಲಯ ನಿ|
ಷ್ಕಲಿತ ವಿಮಲಬ್ರಹ್ಮಚೂಡಾರತ್ನ ನಡೆತಂದ||
ಚಿತ್ರ ಶಂಕರ್ ಚಂದಮಾಮ




ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ




ನುಡಿದ||

ಚಿತ್ರ ಶಂಕರ್ ಚಂದಮಾಮ

ತರಿಸಿದನು ಬಳಿಕಖಿಳ ಭೋಜ್ಯದ|
ನಿರುಪಮಿತ ಸಾಧನ ಸಮಗ್ರವ|
ವಿರಚಿಸಿತು ಮಣಿಮಂಟಪವು ಮಯನಿಂದ
ಪಾಳಯದ||
ವರಪುರೋಭಾಗದಲಿ ನಾನಾ|
ಪರಿಯ ಸಂಭ್ರಮದಿಂದ ನೆರೆ ವಿ|
ಸ್ತರಣದಲಿ ಬಿದ್ದೂಟವಾದುದು ಸಕಲಕಪಿಬಲಕೆ||
ಚಿತ್ರ ಶಂಕರ್ ಚಂದಮಾಮ



ಐಸೆ ಮತ್ತೇನೆಂದು ನೃಪತಿ ಸು|
ವಾಸಿನಿಯ ಕೈವಿಡಿದು ಲಂಕಾ|
ಧೀಶನುಗ್ಗಡಣೆಯಲಿ ಬಂದೇರಿದನು ಪುಷ್ಪಕವ||
ಕೀಶಪತಿ ಜಾಂಬವ ಸುಷೇಣಕ|
ಕೇಸರಿ ಪ್ರಮುಖಾದಿ ಬಲ ಭೂ|
ಮೀಶನಾಜ್ಞೆಯಲೇರಿದರು ಕೌಬೇರಪುಷ್ಪಕವ||
ಚಿತ್ರ ಶಂಕರ್ ಚಂದಮಾಮ



अपि स्वर्णमयी लङ्का न मे लक्ष्मण रोचते ।
जननी जन्मभूमिश्च स्वर्गादपि गरीयसी ॥



ಧಾಮ ಬಂದನು ಭರತ ಚಿತ್ತೈಸೆಂದನಾ ಹನುಮ||

ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಮಣಿಖಚಿತ ಜಾಂಬೂನದಮರು|
ದ್ಗಣದ ಕೋಟಾವಳಯದುರು ಭಾ|
ರಣೆಯ ಮಖಶಾಲೆಗಳ ಮುಗಿಲಟ್ಟಳೆಯ
ಗೋಪುರದ||
ಘೃಣಿವಿಕೀರ್ಣ ಸುರತ್ನಮಯ ಕೇ|
ವಣದ ಕಲಶವ್ರಜದ ಕೇತನ|
ಗಣದ ವರ ಸಾಕೇತನಗರವ ಕಂಡರಖಿಳಜನ||
ಚಿತ್ರ ಶಂಕರ್ ಚಂದಮಾಮ



ಗುರುವಸಿಷ್ಠನ ವಾಮದೇವನ|
ವರಮುನಿಪಜಾಬಾಲಿಯಂಘ್ರಿಗೆ|
ದರುಶನವ ನೀಡಿದನು ವಿನಮಿತನಾಗಿ
ವಿನಯದಲಿ||
ಭರತ ಶತ್ರುಘ್ನರನು ಕಂಗಳ|
ಲುರುಳುವಶ್ರುಕಣಾಳಿಗಳ ಕಾ|
ಹುರತೆಯಲಿ ಬಿಗಿಯಪ್ಪಿ ಬಳಿಕಿಂತೆಂದನಾ
ರಾಮ||
ಚಿತ್ರ ಶಂಕರ್ ಚಂದಮಾಮ



ಜಲರುಹಾಕ್ಷನ ಮೂರ್ತಿಯನು ಕಂ|
ಗಳಲಮರ್ಚಿ ನೃಪಾಲ ಪುಷ್ಪಾಂ|
ಜಲಿಗೆದರಿ ಮೈಯಿಕ್ಕಿದನು ಭಯಭರಿತ
ಭಕ್ತಿಯಲಿ||



ಲವನೆ ಕೇಳ್ಕೈ ಬಳಿಕಲಾ ನಾ|
ಲುವರಿಗಾಯ್ತು ಜಟಾವಿಸರ್ಜನ|
ವವಿರಳದ ಸಂಭ್ರಮದಿ ಮಜ್ಜನವಾಯ್ತು
ಮಂಗಳೆಗೆ||
ವಿವಿಧ ರತ್ನಾಭರಣದಲಿ ನವ|
ನಿವಸನದ ಲೇಪನದಲಮಳೋ|
ತ್ಸವವ ತಾಳ್ದರು
ಮುನಿಗಳಾಶೀರ್ವಾದಘೋಷದಲಿ||


ವರ ಸುಮಂತಕ ತುರಗವನು ಚ|
ಪ್ಪರಿಸಿದನು ಸೂತತ್ವದಲಿ ಚಾ|
ಮರವನಿಕ್ಕಿದನಿದ್ದೆಸೆಯಲಾ ಭರತ
ರಘುಪತಿಯ||
ಧರಿಸಿದನು ಬೆಳುಗೊಡೆಯನೂರ್ಮಿಳೆ|
ಯರಸನಾ ಶತ್ರುಘ್ನನುರು ಬಂ|
ಧುರದ ಹಡಪದ ಹೆಗಲಲೆಸೆದನು ಕುಶನೆ
ಕೇಳೆಂದ||

ಚಿತ್ರ ಶಂಕರ್ ಚಂದಮಾಮ



ವಿಮಲಮತಿ ಕುಶ ಕೇಳಿದೈ ಸಂ|
ಭ್ರಮಿಸಿದನು ವೈಶಾಖ ಸಿತ ಸ|
ಪ್ತಮಿಯ ದಿನ ಮೂರ್ಧಾಭಿಷೇಚನರಚನೆ
ರಘುಪತಿಗೆ||
ಅಮರತತಿ ನೆರೆದುದು ವಸಿಷ್ಠ|
ಪ್ರಮುಖರೊಗ್ಗಾಯ್ತುದಧಿ ಸೀಮಾ|
ಪ್ರಮಿತ ಪಾರ್ಥಿವನಿಕರ ಕೂಡಿತಿ
ಪಟ್ಟಕವನಿಪನ||
ಚಿತ್ರ ವಡ್ಡಾದಿ ಪಾಪಯ್ಯ ಚಂದಮಾಮ



ಭವಭವಾರ್ಜಿತ ದುರಿತಕೋಟಿಯ|
ತವಿಸುವಗ್ಗದ ನಾಮ ಸರಸಿಜ|
ಭವಭವಾಚ್ಯುತರಮಲಪದವಿಯನೀವ
ಗುಣನಾಮ||
ಶಿವನ ನಚ್ಚಿನನಾಮ ಗಿರಿಸಂ|
ಭವೆಯ ನೇಮದ ನಾಮ ಸುರನರ|
ಭುವನ ಪಾವನ ನಾಮ ಸೀತಾಪತಿಯ
ಸಿರಿನಾಮ||

ಚಿತ್ರ ಎಂಟಿವಿ ಆಚಾರ್ಯ ಚಂದಮಾಮ